KA / BG-GPO / 2515 / WPP-47 / 2009-2011

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

ಸಂಪುಟ ೧೪೬ | ಬೆಂಗಳೂರು, ಗುರುವಾರ, ಮೇ ೫, ೨೦೧೧, (ವೈಶಾಖ ೧೫, ಶಕ ವರ್ಷ ೧೯೩೩) | ಸಂಚಿಕೆ ೧೮

## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಇಂಧನ ಸಚಿವಾಲಯ

**ವಿಷಯ :** ಮೆ॥ ಭದ್ರಗಿರಿ ಪವರ್ ಪ್ರೈವೇಟ್ ಲಿಮಿಟೆಡ್ ಇವರಿಗೆ 3.00 ಮೆಗಾ ವ್ಯಾಟ್ ಸಾಮರ್ಥ್ಯದ ಗೋಂದಿ ಕಿರುಜಲ ವಿದ್ಯುತ್ ಯೋಜನೆಗಾಗಿ ಕಾಲಾವಕಾಶ ವಿಸ್ತರಣೆ ಬಗ್ಗೆ.

**ಓದಲಾಗಿದೆ :**

1. ಸರ್ಕಾರಿ ಆದೇಶ ಸಂಖ್ಯೆ : ಡಿಇ 111 ಎನ್‌ಸಿಇ 2001 ದಿನಾಂಕ : 08–10–2001.
2. ಸರ್ಕಾರದ ಆದೇಶ ಸಂಖ್ಯೆ : ಇಎನ್ 449 ಎನ್‌ಸಿಇ 2004 ದಿನಾಂಕ : 30–12–2004.
3. ಸರ್ಕಾರದ ಆದೇಶ ಸಂಖ್ಯೆ : ಇಎನ್ 255 ಎನ್‌ಸಿಇ 2005 ದಿನಾಂಕ : 16–12–2005.
4. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ : ಕೆಆರ್‌ಇಡಿ/06/ಶೋಕಾಸ್ ನೋಟೀಸ್/2010 ದಿನಾಂಕ : 17–04–2010.
5. ಕಾರಣ ಕೇಳುವ ನೋಟೀಸು ಸಂಖ್ಯೆ : ಇಎನ್ 167 ಎನ್‌ಸಿಇ 2010, ದಿನಾಂಕ : 26–04–2010.
6. ಮೆ॥ ಭದ್ರಗಿರಿ ಪವರ್ ಪ್ರೈವೇಟ್ ಲಿಮಿಟೆಡ್ ಇವರ ಪತ್ರ ಸಂಖ್ಯೆ : BPPL/GM-A/77/2010-11, ದಿನಾಂಕ : 27–04–2010.
7. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ : ಕೆಆರ್‌ಇಡಿ/06/ಗೋಂದಿ ಕಿಜವಿ/2010/2019, ದಿನಾಂಕ : 30–06–2010/06–07–2010.
8. ದಿನಾಂಕ : 07–08–2010 ರಂದು ನಡೆದ ನಿರೂಪಣಾ ಸಭೆಯ ನಡವಳಿ.
9. ಸರ್ಕಾರದ ಪತ್ರ ಸಂಖ್ಯೆ : ಇಎನ್ 167 ಎನ್‌ಸಿಇ 2010 ದಿನಾಂಕ : 06–10–2010.
10. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ : ಕೆಆರ್‌ಇಡಿ/06/ಎಸ್‌ಹೆಚ್ 66/ಗೋಂದಿ/08, ದಿನಾಂಕ : 29–12–2010/01–01–2011.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ ಮೆ॥ ಭದ್ರಗಿರಿ ಪವರ್ ಪ್ರೈವೇಟ್ ಲಿಮಿಟೆಡ್ ಇವರಿಗೆ ಚಿಕ್ಕಮಗಳೂರು ಜಿಲ್ಲೆಯ ತರೀಕೆರೆ ತಾಲ್ಲೂಕಿನ ಸಿದ್ಲಾಪುರ ಗ್ರಾಮದ ಗೋಂದಿ ಅಣೆಕಟ್ಟಿನ ಎಡದಂಡೆಗೆ ಅಡ್ಡಲಾಗಿ 1.00 ಮೆಗಾ ವ್ಯಾಟ್ ಸಾಮರ್ಥ್ಯದ ಗೋಂದಿ ಕಿರುಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಆದೇಶದಲ್ಲಿ ಮೆ॥ ಭದ್ರಗಿರಿ ಪವರ್ ಪ್ರೈವೇಟ್ ಲಿಮಿಟೆಡ್ ಇವರಿಗೆ ಚಿಕ್ಕಮಗಳೂರು ಜಿಲ್ಲೆಯ ತರೀಕೆರೆ ತಾಲ್ಲೂಕಿನ ಸಿದ್ಲಾಪುರ ಗ್ರಾಮದ ಗೋಂದಿ ಅಣೆಕಟ್ಟಿನ ಎಡದಂಡೆಗೆ ಅಡ್ಡಲಾಗಿ ಹಂಚಿಕೆ ಮಾಡಿರುವ 1.00 ಮೆಗಾ ವ್ಯಾಟ್ ಸಾಮರ್ಥ್ಯದ ಗೋಂದಿ ಕಿರುಜಲ ವಿದ್ಯುತ್ ಯೋಜನೆಯನ್ನು 3.00 ಮೆಗಾ ವ್ಯಾಟ್ ಸಾಮರ್ಥ್ಯಕ್ಕೆ ಹೆಚ್ಚಿಸಿ ಅನುಷ್ಠಾನ ಮಾಡಲು ಅನುಮತಿ ನೀಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಆದೇಶದಲ್ಲಿ ಮೆ॥ ಭದ್ರಗಿರಿ ಪವರ್ ಪ್ರೈವೇಟ್ ಲಿಮಿಟೆಡ್ ಇವರ ಮೇಲಿನ ಯೋಜನೆಯ ಸ್ಥಳವನ್ನು ಶಿವಮೊಗ್ಗ ಜಿಲ್ಲೆಯ ಭದ್ರಾವತಿ ತಾಲ್ಲೂಕಿನ ಚಿಕ್ಕಗೊಪ್ಪನಹಳ್ಳಿ ಗ್ರಾಮದ ಗೋಂದಿ ಅಣೆಕಟ್ಟಿನ ಎಡದಂಡೆಗೆ ಬದಲಾಯಿಸಿ ಅನುಮತಿ ನೀಡಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (4)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಅಭಿವೃದ್ಧಿದಾರರ ಅನುಷ್ಠಾನದ ಅವಧಿಯು ಸರ್ಕಾರದ ಆದೇಶದಂತೆ ಪೂರ್ಣಗೊಂಡಿದ್ದು, ಅನುಷ್ಠಾನದ ನಿಟ್ಟಿನಲ್ಲಿ ಯಾವುದೇ ಪ್ರಗತಿಯನ್ನು ಸಾಧಿಸದೇ

ಇರುವುದರಿಂದ ಹಾಗೂ ಕಾಲಾವಕಾಶ ವಿಸ್ತರಣೆಯನ್ನು ಮಾಡಿಕೊಳ್ಳದೇ ಇರುವ ಹಿನ್ನೆಲೆಯಲ್ಲಿ ಮೆ॥ ಭದ್ರಗಿರಿ ಪವರ್ ಪ್ರೈವೇಟ್ ಲಿಮಿಟೆಡ್ ಇವರಿಗೆ ಯೋಜನೆ ಏಕೆ ರದ್ದುಪಡಿಸಬಾರದು ಎಂಬುದಕ್ಕೆ ಕಾರಣ ಕೇಳುವ ನೋಟೀಸನ್ನು ಜಾರಿ ಮಾಡಲು ಶಿಫಾರಸ್ಸು ಮಾಡಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (5)ರ ಕಾರಣ ಕೇಳುವ ನೋಟೀಸಿನಲ್ಲಿ ಯೋಜನೆಯ ಹಂಚಿಕೆ ಆದೇಶವನ್ನು ಏಕೆ ರದ್ದುಪಡಿಸಬಾರದೆಂದು ಮೆ॥ ಭದ್ರಗಿರಿ ಪವರ್ ಪ್ರೈವೇಟ್ ಲಿಮಿಟೆಡ್ ಇವರಿಗೆ ನೋಟೀಸನ್ನು ಕಳುಹಿಸಿದ 15 ದಿನಗಳೊಳಗಾಗಿ ಸಮಜಾಯಿಷಿಯನ್ನು ನೀಡುವಂತೆ ತಿಳಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (6)ರ ಅಭಿವೃದ್ಧಿದಾರರು, ಈ ಯೋಜನೆಗಾಗಿ ಕಾಲಾವಕಾಶವನ್ನು ಕೆ.ಆರ್.ಇ.ಡಿ.ಎಲ್.ಗೆ ಕೋರಲಾಗಿದ್ದರೂ ಅವರಿಂದ ಯಾವುದೇ ಪ್ರತಿಕ್ರಿಯೆ ಇಲ್ಲವೆಂದು ತಿಳಿಸಿ, ಈ ಯೋಜನೆಗಾಗಿ IREDA ದಿಂದ ಸಾಲ ಮಂಜೂರಾತಿಯಾಗಿದ್ದು, ಯೋಜನೆಯನ್ನು ಜುಲೈ 2010ರೊಳಗಾಗಿ ಪ್ರಾರಂಭಿಸಲಾಗುವುದೆಂದು ಕಾರಣ ಕೇಳುವ ನೋಟೀಸಿಗೆ ಉತ್ತರ ನೀಡಿರುತ್ತಾರೆ. ಸದರಿ ಉತ್ತರವನ್ನು ಸರ್ಕಾರದ ಪತ್ರ ಸಂಖ್ಯೆ : ಇಎನ್ 167 ಎನ್‌ಸಿಇ 2010, ದಿನಾಂಕ : 02–07–2010ರಲ್ಲಿ ಕೆ.ಆರ್.ಇ.ಡಿ.ಎಲ್.ಗೆ ಕಳುಹಿಸಿ ಅವರಿಂದ ವರದಿಯನ್ನು ಕೋರಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (7)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು ಈ ಕಂಪನಿಯವರು ಯೋಜನೆಯನ್ನು 2010ರ ಸೆಪ್ಟೆಂಬರ್ ತಿಂಗಳಿನಲ್ಲಿ ಅನುಷ್ಠಾನಗೊಳಿಸಲು ಸಿದ್ಧತೆ ಮಾಡಿಕೊಂಡಿರುವುದರಿಂದ, ಯೋಜನೆಯ ಅನುಷ್ಠಾನದ ಕಾಲಾವಧಿಯನ್ನು ದಿನಾಂಕ : 01–10–2009 ರಿಂದ 30–09–2010ರವರೆಗೆ ವಿಸ್ತರಿಸಲು ಶಿಫಾರಸ್ಸು ಮಾಡಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (8)ರ ನಿರೂಪಣಾ ಸಭೆಯ ನಿರ್ಣಯದ ಉದ್ಧೃತ ಭಾಗವು ಈ ಕೆಳಗಿನಂತಿದೆ :–

> "ಈ ಕಂಪನಿಗೆ ದಿನಾಂಕ : 08–10–2001ರ ಸರ್ಕಾರಿ ಆದೇಶದಲ್ಲಿ ಚಿಕ್ಕಮಗಳೂರು ಜಿಲ್ಲೆಯ ತರೀಕೆರೆ ತಾಲ್ಲೂಕಿನ ಸಿದ್ದಿಪುರ ಗ್ರಾಮದ ಬಳಿ 1.00 ಮೆ.ವ್ಯಾ. ಸಾಮರ್ಥ್ಯದ ಕಿರುಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿತ್ತು. ಈ ಯೋಜನೆಯ ಸಾಮರ್ಥ್ಯವನ್ನು ದಿನಾಂಕ : 30–12–2004ರ ಆದೇಶದಲ್ಲಿ 3.00 ಮೆ.ವ್ಯಾ.ಗೆ ಹೆಚ್ಚಿಸಲಾಗಿತ್ತು. ಅಭಿವೃದ್ಧಿದಾರರು ಯೋಜನೆಯನ್ನು ನಿಗದಿತ ಅವಧಿಯೊಳಗೆ ಅನುಷ್ಠಾನ ಮಾಡದಿರುವ ಹಿನ್ನೆಲೆಯಲ್ಲಿ, ಯೋಜನೆಯ ಹಂಚಿಕೆಯನ್ನು ಏಕೆ ರದ್ದುಪಡಿಸಬಾರದೆಂಬುದಕ್ಕೆ ಸಮಜಾಯಿಷಿಯನ್ನು ನೀಡುವಂತೆ ಕೋರಿ ಕಾರಣ ಕೇಳುವ ನೋಟೀಸನ್ನು ದಿನಾಂಕ : 26–04–2010ರಂದು ಜಾರಿ ಮಾಡಲಾಗಿತ್ತು.
>
> ಯೋಜನೆಯ ಅನುಷ್ಠಾನಕ್ಕಾಗಿ ಕಾಲಾವಕಾಶವನ್ನು ವಿಸ್ತರಿಸಲು ಕೆ.ಆರ್.ಇ.ಡಿ.ಎಲ್.ಗೆ ಪಾವತಿಸಬೇಕಾಗಿರುವ ಶುಲ್ಕವನ್ನು ಪಾವತಿಸಲಾಗಿದೆ ಎಂದು ತಿಳಿಸಿರುತ್ತಾರೆ. ನಿರೂಪಣೆಯ ಸಂದರ್ಭದಲ್ಲಿ ಅಭಿವೃದ್ಧಿದಾರರು ಕಾಮಗಾರಿಯ ಕೆಲಸಗಳಲ್ಲಿ ಪ್ರಗತಿಯನ್ನು ಸಾಧಿಸಲಾಗಿದೆ ಎಂದು, ಇ ಅಂಡ್ ಎಂ. ಪರಿಕರಗಳು ಯೋಜನೆಯ ಸ್ಥಳಕ್ಕೆ ತಲುಪಿರುತ್ತದೆ ಎಂದು ತಿಳಿಸಿದರು. ಈ ಯೋಜನೆಯನ್ನು 2010ರೊಳಗಾಗಿ ಪ್ರಾರಂಭಿಸಲಾಗುವುದೆಂದು ತಿಳಿಸಿದರು. ಈ ಮಾಹಿತಿಯ ಆಧಾರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಕಳುಹಿಸಬೇಕೆಂದು ನಿರ್ಣಯಿಸಲಾಯಿತು."

ಮೇಲೆ ಓದಲಾದ ಕ್ರಮ ಸಂಖ್ಯೆ (9)ರ ಪತ್ರದಲ್ಲಿ, ದಿನಾಂಕ : 07–08–2010ರಂದು ನಡೆದ ನಿರೂಪಣಾ ಸಭೆಯ ನಿರ್ಣಯದಂತೆ, ಪ್ರಸ್ತಾವನೆಯನ್ನು ಕಳುಹಿಸಿಕೊಡಲು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರನ್ನು ಕೋರಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (10)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು, ಅಭಿವೃದ್ಧಿದಾರರು ಯೋಜನೆಯ ಅನುಷ್ಠಾನದ ನಿಟ್ಟಿನಲ್ಲಿ ಸಾಧಿಸಿರುವ ಪ್ರಗತಿಯನ್ನು ಪಟ್ಟಿ ಮಾಡಿ ಕೆ.ಆರ್.ಇ.ಡಿ.ಎಲ್.ಗೆ ಪಾವತಿಸಬೇಕಾಗಿರುವ ಉಳಿದ ಶುಲ್ಕವನ್ನು ಪಾವತಿಸಬೇಕೆಂಬ ನಿಬಂಧನೆಯೊಂದಿಗೆ ದಿನಾಂಕ : 06–01–2008ರಿಂದ ಮುಂದಿನ ಮೂರು ವರ್ಷದ ಅವಧಿಗೆ ಕಾಲಾವಕಾಶವನ್ನು ವಿಸ್ತರಿಸಲು ಶಿಫಾರಸ್ಸು ಮಾಡಿ ಪ್ರಸ್ತಾವನೆಯನ್ನು ಕಳುಹಿಸಿಕೊಟ್ಟಿರುತ್ತಾರೆ.

ಅಭಿವೃದ್ಧಿದಾರರು ಎಲ್ಲಾ ಅನುಮೋದನೆಗಳನ್ನು ವಾಸ್ತವವಾಗಿ ಪಡೆದುಕೊಂಡಿರುವುದರಿಂದ ಹಾಗೂ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಕಾಲಾವಧಿ ವಿಸ್ತರಣೆಯನ್ನು ನೀಡಬಹುದಾಗಿದೆ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿರುವ ಹಿನ್ನೆಲೆಯಲ್ಲಿ, ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ :–

**ಸರ್ಕಾರಿ ಆದೇಶ ಸಂಖ್ಯೆ : ಇಎನ್ 167 ಎನ್‌ಸಿಇ 2010, ಬೆಂಗಳೂರು, ದಿನಾಂಕ: 28–02–2011**

ಮೆ॥ ಭದ್ರಗಿರಿ ಪವರ್ ಪ್ರೈವೇಟ್ ಲಿಮಿಟೆಡ್ ಇವರಿಗೆ ಶಿವಮೊಗ್ಗ ಜಿಲ್ಲೆಯ ಭದ್ರಾವತಿ ತಾಲ್ಲೂಕಿನ ಚಿಕ್ಕಗೊಪ್ಪನಹಳ್ಳಿ ಗ್ರಾಮದ ಗೋಂದಿ ಅಣೆಕಟ್ಟಿನ ಎಡದಂಡೆಗೆ ಅಡ್ಡಲಾಗಿ ಅನುಮತಿಸಲಾದ 3.00 ಮೆಗಾ ವ್ಯಾಟ್ ಸಾಮರ್ಥ್ಯದ ಗೋಂದಿ ಕಿರುಜಲ ವಿದ್ಯುತ್ ಯೋಜನೆಯ ಅನುಷ್ಠಾನಕ್ಕಾಗಿ ಕೆಳಗಿನ ನಿಬಂಧನೆಗೊಳಪಟ್ಟು ದಿನಾಂಕ : 30–06–2011ರ ತನಕ ಕಾಲಾವಕಾಶವನ್ನು ವಿಸ್ತರಿಸಲಾಗಿದೆ :–

1. ಅಭಿವೃದ್ಧಿದಾರರು ಈ ಸಂಬಂಧ ಬಾಕಿ ಇರುವ ಶುಲ್ಕವನ್ನು ಕೆ.ಆರ್.ಇ.ಡಿ.ಎಲ್.ಗೆ ಪಾವತಿಸತಕ್ಕದ್ದು.
2. ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.
3. ಮೇಲೆ ಓದಲಾದ (1)ರ ಹಂಚಿಕೆ ಆದೇಶದ ಇತರ ನಿಬಂಧನೆಗಳು ಯಥಾವತ್ತಾಗಿ ಮುಂದುವರೆಯುತ್ತವೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸುರೇಶ್ ಬಿ. ಕೃಷ್ಣಪ್ಪನವರ್**

ಸರ್ಕಾರದ ಅಧೀನ ಕಾರ್ಯದರ್ಶಿ

ಇಂಧನ ಇಲಾಖೆ

ಪಿ.ಆರ್. 628

## ಇಂಧನ ಸಚಿವಾಲಯ

**ವಿಷಯ :** "ಜವಾಹರಲಾಲ್ ನೆಹರು ನ್ಯಾಶನಲ್ ಸೋಲಾರ್ ಮಿಷನ್" ಕಾರ್ಯಕ್ರಮದಲ್ಲಿ ಎನ್.ಟಿ.ಪಿ.ಸಿ. ವಿದ್ಯುತ್ ವ್ಯಾಪಾರ ನಿಗಮದ ಮುಖಾಂತರ ಕರ್ನಾಟಕದಲ್ಲಿ ಸೌರ ವಿದ್ಯುತ್ ಸ್ಥಾವರ ಯೋಜನೆಯ ವಿದ್ಯುತ್ ಖರೀದಿ ಒಪ್ಪಂದಗಳನ್ನು ಸಹಿ ಮಾಡುವ ಬಗ್ಗೆ.

**ಓದಲಾಗಿದೆ :**

1. ಎನ್.ಟಿ.ಪಿ.ಸಿ. ವಿದ್ಯುತ್ ವ್ಯಾಪಾರ ನಿಗಮದವರ ಪತ್ರ ಸಂಖ್ಯೆ : ಎನ್.ವಿ.ವಿ.ಎನ್./ಬಿಡಿ/ಜೆಎನ್ಎನ್ಎಸ್ಎಮ್/ಎನ್‌ಪಿ–ಸೋಲಾರ್/ಇಓಐ/31/11/00000001 ದಿನಾಂಕ : 26–11–2010.
2. ವ್ಯವಸ್ಥಾಪಕ ನಿರ್ದೇಶಕರು ಬೆಂಗಳೂರು ವಿದ್ಯುಚ್ಛಕ್ತಿ ಸರಬರಾಜು ಕಂಪನಿ ನಿಯಮಿತರವರ ಪತ್ರ ಸಂಖ್ಯೆ : ಜಿಎಮ್(ಪಿಪಿ)/ಡಿಜಿಎಮ್–1ಎಜಿಎಮ್–1ಬಿಸಿ–39/ಎಫ್–3811 ದಿನಾಂಕ : 04–01–2011.
3. ವ್ಯವಸ್ಥಾಪಕ ನಿರ್ದೇಶಕರು ಬೆಂಗಳೂರು ವಿದ್ಯುಚ್ಛಕ್ತಿ ಸರಬರಾಜು ಕಂಪನಿ ನಿಯಮಿತರವರ ಪ್ರ.ವ್ಯ (ವಿಖ)ಉಪ್ರವ್ಯ1/ಸಪ್ರವ್ಯ 1/ಬಿಸಿ–39/ಎಫ್–2472ಜೆ/4312–16 ದಿನಾಂಕ : 04–02–2011.

**ಪ್ರಸ್ತಾವನೆ:**

ರಾಷ್ಟ್ರೀಯ ಶಾಖೋತ್ಪನ್ನ ವಿದ್ಯುತ್ ನಿಗಮ ನಿಯಮಿತ (ಎನ್‌ಟಿಪಿಸಿ) ವಿದ್ಯುತ್ ವ್ಯಾಪಾರ ನಿಗಮ ನಿಯಮಿತ (ವಿವಿಎನ್ಎಲ್)ದ ಮುಖ್ಯ ಕಾರ್ಯನಿರ್ವಹಣಾ ಅಧಿಕಾರಿ (ಸಿ.ಇ.ಓ) ರವರು ಮೇಲೆ ಓದಲಾದ (1)ರಲ್ಲಿ, ರಾಜ್ಯದಲ್ಲಿ ವಿದ್ಯುತ್ ವಿತರಣಾ ಕಂಪನಿಗಳು, ಸೌರ ವಿದ್ಯುತ್ ಇಂಧನವನ್ನು ಶಾಖೋತ್ಪನ್ನ ವಿದ್ಯುತ್ ಇಂಧನದೊಡನೆ ಸೇರಿಸಿ ಖರೀದಿ ಮಾಡಲು ಆಪೇಕ್ಷೆಯನ್ನು ಕೋರಿರುತ್ತಾರೆ. ಇದರಂತೆ ಮೇಲೆ ಓದಲಾದ (2)ರಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ ನಿಯಮಿತ ರವರು, 100 ಮೆಗಾವ್ಯಾಟ್ ಸಾಮರ್ಥ್ಯದ ವಿದ್ಯುತ್ ಖರೀದಿ ಮಾಡುವ ವಿವರಣ ಪಟ್ಟಿಯನ್ನು Additional General Manager I/C Business Development and Solar NTPC VVNL ರವರಿಗೆ, ರಾಜ್ಯದ ಎಲ್ಲಾ ವಿದ್ಯುತ್ ವಿತರಣಾ ಕಂಪನಿಗಳ ಪರವಾಗಿ ಅಪೇಕ್ಷೆಯನ್ನು, ನಿಗಧಿತ ನಮೂನೆಯಲ್ಲಿ ಸಲ್ಲಿಸಿದ್ದರು ಮೇಲೆ ಓದಲಾದ (3)ರಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ ನಿಯಮಿತರವರು, ಇಂಧನ ಇಲಾಖೆ ನಿರ್ದೇಶನದಂತೆ ಜವಾಹರಲಾಲ್ ನೆಹರು ನ್ಯಾಶನಲ್ ಸೋಲಾರ್ ಮಿಷನ್ ಕಾರ್ಯಕ್ರಮದಲ್ಲಿ, ಎನ್.ಟಿ.ಪಿ.ಸಿ. ವಿದ್ಯುತ್ ವ್ಯಾಪಾರ ನಿಗಮದ ಮುಖಾಂತರ, ಸೌರ ವಿದ್ಯುತ್ ಸ್ಥಾವರ ಯೋಜನೆಯ ವಿದ್ಯುತ್ ಖರೀದಿ ಒಪ್ಪಂದವನ್ನು ನವದೆಹಲಿಯಲ್ಲಿ ದಿನಾಂಕ : 07–01–2011ರಂದು, ಕರ್ನಾಟಕ ರಾಜ್ಯದ ಎಲ್ಲಾ ವಿದ್ಯುತ್ ವಿತರಣಾ ಕಂಪನಿಗಳ ಪರವಾಗಿ, ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ ವತಿಯಿಂದ ಸಹಿ ಮಾಡಲಾಗಿರುತ್ತದೆ ಎಂದು ತಿಳಿಸಿರುತ್ತಾರೆ. ಹಾಗೂ ಮುಂದಿನ ದಿನಗಳಲ್ಲಿ ವಿದ್ಯುತ್ ಬಿಲ್ ಪಾವತಿಸುವ ಸಂದರ್ಭದಲ್ಲಿ, ಇತರೆ ಎಲ್ಲಾ ವಿದ್ಯುತ್ ವಿತರಣಾ ಕಂಪನಿಗಳು ಸಹ ಅವರವರ ಶೇಕಡವಾರು ಭಾಗಕ್ಕೆ ವಿದ್ಯುತ್ ಬಿಲ್ ಪಾವತಿಸಬೇಕಾಗಿರುತ್ತದೆ. ಅದರಂತೆ ಎಲ್ಲಾ ವಿದ್ಯುತ್ ವಿತರಣಾ ಕಂಪನಿಗಳ ಪರವಾಗಿ ಸದರಿ ವಿದ್ಯುತ್ ಖರೀದಿ ಒಪ್ಪಂದಕ್ಕೆ ಸಹಿ ಮಾಡುವ ಅಧಿಕಾರವನ್ನು ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿಗೆ ನಿಯೋಜಿಸಿರುವ ಬಗ್ಗೆ ಸರ್ಕಾರಿ ಆದೇಶವನ್ನು ಹೊರಡಿಸಲು ಕೋರಿರುತ್ತಾರೆ.

ಅದರಂತೆ ಈ ಕೆಳಗಿನ ಆದೇಶ :–

**ಸರ್ಕಾರಿ ಆದೇಶ ಸಂಖ್ಯೆ : ಇಎನ್ 88 ಎನ್‌ಸಿಇ 2011, ಬೆಂಗಳೂರು, ದಿನಾಂಕ: 11–02–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ, "ಜವಾಹರಲಾಲ್ ನೆಹರು ನ್ಯಾಶನಲ್ ಸೋಲಾರ್ ಮಿಷನ್" ಕಾರ್ಯಕ್ರಮದಡಿಯಲ್ಲಿ ಎನ್.ಟಿ.ಪಿ.ಸಿ. ವಿದ್ಯುತ್ ವ್ಯಾಪಾರ ನಿಗಮದ ಸೌರ ವಿದ್ಯುತ್ ಖರೀದಿ ಒಪ್ಪಂದಗಳನ್ನು(ಪಿಪಿಎ) ರಜ್ಯದ ಎಲ್ಲಾ ವಿದ್ಯುತ್ ವಿತರಣಾ ಕಂಪನಿಗಳ ಪರವಾಗಿ ಸಹಿ ಮಾಡಿರುವುದಕ್ಕೆ ಬೆಂಗಳೂರು ವಿದ್ಯುಚ್ಛಕ್ತಿ ಸರಬರಾಜು ಕಂಪನಿಗೆ ಘಟನೋತ್ತರ ಅನುಮತಿ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸುರೇಶ್ ಬಿ. ಕೃಷ್ಣಪ್ಪನವರ್**

ಸರ್ಕಾರದ ಅಧೀನ ಕಾರ್ಯದರ್ಶಿ

ಇಂಧನ ಇಲಾಖೆ

ಪಿ.ಆರ್. 629

## ಇಂಧನ ಸಚಿವಾಲಯ

**ವಿಷಯ :** ಮೆ॥ ದಾಬೇವಾಡಿ ಹೈಡ್ರೋ ಪವರ್ ಪ್ರೈವೇಟ್ ಲಿಮಿಟೆಡ್ ಇವರಿಗೆ ಯೋಜನೆಯ ಅನುಷ್ಠಾನಕ್ಕೆ ಕಾಲಾವಕಾಶ ವಿಸ್ತರಿಸುವ ಬಗ್ಗೆ.

**ಓದಲಾಗಿದೆ :**

1. ಸರ್ಕಾರಿ ಆದೇಶ ಸಂಖ್ಯೆ : ಇಂಇ 238 ಎನ್‌ಸಿಇ 2002 ದಿನಾಂಕ : 10–04–2003.
2. ಸರ್ಕಾರಿ ಆದೇಶ ಸಂಖ್ಯೆ : ಇಎನ್ 93 ಎನ್‌ಸಿಇ 2005 ದಿನಾಂಕ : 18–04–2006.
3. ಸರ್ಕಾರಿ ಆದೇಶ ಸಂಖ್ಯೆ : ಇಎನ್ 28 ಎನ್‌ಸಿಇ 2008 ದಿನಾಂಕ : 03–03–2008.
4. ಸರ್ಕಾರಿ ಆದೇಶ ಸಂಖ್ಯೆ : ಇಎನ್ 70 ಎನ್‌ಸಿಇ 2009 ದಿನಾಂಕ : 12–06–2009.
5. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ ಕೆಆರ್ಇಡಿ/06/ದಾಬೇವಾಡಿ/09/3575, ದಿನಾಂಕ : 28/29–10–2009 ಮತ್ತು ಕೆಆರ್ಇಡಿ/06/ದಾಬೇವಾಡಿ ಕಿ.ಜ.ವಿ./2010/600, ದಿನಾಂಕ : 23–02–2010/03–03–2010.

**ಪ್ರಸ್ತಾವನೆ:**

ಮೆ॥ ಅಜಿ ಇಂಜಿನಿಯರ್ಸ್ ಕಂಪನಿಗೆ ಉತ್ತರ ಕನ್ನಡ ಜಿಲ್ಲೆಯ ಜೋಯಿಡಾ ತಾಲ್ಲೂಕಿನ ದಾಬೇವಾಡಿ ಗ್ರಾಮದ ಬಳಿ ಪಂಡ್ರಿ ನದಿಗೆ ಅಡ್ಡಲಾಗಿ 2.00 ಮೆಗಾ ವ್ಯಾಟ್ ಸಾಮರ್ಥ್ಯದ ದಾಬೆವಾಡಿ ಕಿರು ಜಲ ವಿದ್ಯುತ್ ಯೋಜನೆಯನ್ನು ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಹಂಚಿಕೆ ಮಾಡಲಾಗಿತ್ತು.

ಸದರಿ ಕಂಪನಿಗೆ ಹಂಚಿಕೆ ಮಾಡಲಾದ ಯೋಜನೆಯ ಸಾಮರ್ಥ್ಯವನ್ನು ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಸರ್ಕಾರಿ ಆದೇಶದಲ್ಲಿ ಸೂಚಿಸಿರುವ ನಿಬಂಧನೆಗೊಳಪಟ್ಟು 12.00 ಮೆಗಾ ವ್ಯಾಟ್‌ಗೆ ಹೆಚ್ಚಿಸಲಾಗಿತ್ತು.

ಮೇಲೆ ತಿಳಿಸಿದ ಯೋಜನೆಯನ್ನು ಅನುಷ್ಠಾನ ಮಾಡಲು ಕಾಲಾವಕಾಶವನ್ನು ಮೇಲೆ ಕ್ರಮ ಸಂಖ್ಯೆ (3)ರಲ್ಲಿ ಓದಲಾದ ಸರ್ಕಾರಿ ಆದೇಶ ಹೊರಡಿಸಿದ ದಿನಾಂಕದಿಂದ ಒಂದು ವರ್ಷದ ಅವಧಿಗೆ ವಿಸ್ತರಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (4)ರ ಆದೇಶದಲ್ಲಿ ಮೆ॥ ಆಜಿ ಇಂಜಿನಿಯರ್ಸ್ ಕಂಪನಿಯ ಹೆಸರನ್ನು ಮೆ॥ ದಾಬೇವಾಡಿ ಹೈಡ್ರೋ ಪವರ್ ಪ್ರೈವೇಟ್ ಲಿಮಿಟೆಡ್ ಎಂದು ಬದಲಾಯಿಸಿ ಯೋಜನೆಯನ್ನು ಅನುಷ್ಠಾನ ಮಾಡಲು ಕಟ್ಟಕಡೆಯದಾಗಿ ದಿನಾಂಕ : 31–03–2010ರವರೆಗೆ ಕಾಲಾವಕಾಶವನ್ನು ವಿಸ್ತರಿಸಲಾಗಿತ್ತು.

ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಇವರು ಮೇಲೆ ಓದಲಾದ ಕ್ರಮ ಸಂಖ್ಯೆ (5)ರ ಪತ್ರಗಳಲ್ಲಿ ಮೆ॥ ಆಜಿ ಇಂಜಿನಿಯರ್ಸ್‌ರವರು ತಮ್ಮ ಮನವಿಯಲ್ಲಿ ಅರಣ್ಯ ಜಮೀನು ಸ್ವಾಧೀನಪಡಿಸಿಕೊಳ್ಳಲು ಸಮಯಾವಕಾಶ ಬೇಕಾಗಿದ್ದು, ಯೋಜನೆಯನ್ನು ಪೂರ್ಣಗೊಳಿಸಲು ದಿನಾಂಕ : 31–03–2011ರವರೆಗೆ ಕಾಲಾವಕಾಶ ಕೋರಿರುವುದರಿಂದ, ಸದರಿ ಕಂಪನಿಗೆ ಯೋಜನೆಯನ್ನು ಪೂರ್ಣಗೊಳಿಸಲು ಕಾಲಾವಕಾಶವನ್ನು ದಿನಾಂಕ : 31–03–2011ರವರೆಗೆ ವಿಸ್ತರಿಸಲು ಶಿಫಾರಸ್ಸು ಮಾಡಿರುತ್ತಾರೆ.

ಮೇಲಿನ ಶಿಫಾರಸ್ಸನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಲಾಗಿದೆ :–

**ಸರ್ಕಾರಿ ಆದೇಶ ಸಂಖ್ಯೆ : ಇಎನ್ 70 ಎನ್‌ಸಿಇ 2009, ಬೆಂಗಳೂರು, ದಿನಾಂಕ: 23–02–2011**

ಮೆ॥ ದಾಬೇವಾಡಿ ಹೈಡ್ರೋ ಪವರ್ ಪ್ರೈವೇಟ್ ಲಿಮಿಟೆಡ್ ಇವರಿಗೆ ಉತ್ತರ ಕನ್ನಡ ಜಿಲ್ಲೆಯ ಜೋಯಿಡಾ ತಾಲ್ಲೂಕಿನ ದಾಬೇವಾಡಿ ಗ್ರಾಮದ ಬಳಿ ಪಂಡ್ರಿ ನದಿಗೆ ಅಡ್ಡಲಾಗಿ ಹಂಚಿಕೆಯಾಗಿರುವ 12.00 ಮೆಗಾ ವ್ಯಾಟ್ ಸಾಮರ್ಥ್ಯದ ದಾಬೇವಾಡಿ ಕಿರುಜಲ ವಿದ್ಯುತ್ ಯೋಜನೆಯನ್ನು ಅನುಷ್ಠಾನ ಮಾಡಲು ಈ ಕೆಳಕಂಡ ನಿಬಂಧನೆಗಳಿಗೊಳಪಟ್ಟು ಕೊನೆಯ ಕಾಲಾವಕಾಶವನ್ನು ದಿನಾಂಕ : 31–12–2011ರ ತನಕ ವಿಸ್ತರಿಸಲಾಗಿದೆ.

1. ಅಭಿವೃದ್ಧಿದಾರರು ಮೆಗಾ ವ್ಯಾಟ್ ಒಂದಕ್ಕೆ ರೂ. 1.00 ಲಕ್ಷದಂತೆ ಒಟ್ಟು ರೂ. 15.00 ಲಕ್ಷಗಳನ್ನು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ penalty ಪಾವತಿಸುವುದು.
2. ದಿನಾಂಕ : 31–12–2011ರೊಳಗಾಗಿ ಯೋಜನೆಯನ್ನು commission ಮಾಡದಿದ್ದಲ್ಲಿ, ಸದರಿ ಮೊತ್ತವನ್ನು "ಅಕ್ಷಯ ಶಕ್ತಿ ನಿಧಿ"ಗೆ ವರ್ಗಾಯಿಸುವುದು.

ಈ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಮೇಲೆ ಕ್ರ.ಸಂ.(1)ರಲ್ಲಿ ಓದಲಾದ ಹಂಚಿಕೆ ಆದೇಶದ ಇತರ ನಿಬಂಧನೆಗಳು ಯಥಾವತ್ತಾಗಿ ಮುಂದುವರೆಯುತ್ತವೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸುರೇಶ್ ಬಿ. ಕೃಷ್ಣಪ್ಪನವರ್**
ಸರ್ಕಾರದ ಅಧೀನ ಕಾರ್ಯದರ್ಶಿ
ಇಂಧನ ಇಲಾಖೆ

ಪಿ.ಆರ್. 630

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಶ್ರೀ ಇ. ಈಶ್ವರನಾಯಕ್, ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಭೂ ಮಂಜೂರಾತಿ) ಇವರ ವಿರುದ್ಧ ಇಲಾಖಾ ವಿಚಾರಣೆ – ದಂಡನೆಯನ್ನು ವಿಧಿಸುವ ಬಗ್ಗೆ

**ಓದಲಾಗಿದೆ :** 1. ನೋಟೀಸ್ ಸಂಖ್ಯೆ ಸಿಆಸುಇ 3 ಎಸ್ ಇ ಎನ್ 2010 ದಿನಾಂಕ: 26–03–2010.
2. ನೋಟೀಸ್ ಸಂಖ್ಯೆ ಸಿಆಸುಇ 3 ಎಸ್ ಇ ಎನ್ 2010 ದಿನಾಂಕ: 06–07–2010.

**ಪ್ರಸ್ತಾವನೆ:**

ಶ್ರೀ ಇ. ಈಶ್ವರನಾಯಕ್, ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಭೂ ಮಂಜೂರಾತಿ) ಇವರು ನಿಯಮಾನುಸಾರ ಸರ್ಕಾರಕ್ಕೆ ನಿಗದಿತವಾಗಿ ಅಂದರೆ 1991ನೇ ಸಾಲಿನಿಂದ 2007–08ರವರೆಗಿನ ಸಾಲುಗಳ ಆಸ್ತಿ ಮತ್ತು ಋಣ ಪಟ್ಟಿ ಸಲ್ಲಿಸದಿರುವ ಆರೋಪಗಳಿಗೆ ಸಂಬಂಧಿಸಿದಂತೆ, ಸದರಿಯವರಿಗೆ ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ನೋಟೀಸ್‌ನೊಂದಿಗೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 12 ರನ್ವಯ ದೋಷಾರೋಪಣಾ ಪಟ್ಟಿ ಜಾರಿಗೊಳಿಸಿ ವಿವರಣೆ ಕೋರಲಾಗಿತ್ತು. ದಿನಾಂಕ 26–03–2010ರ ನೋಟೀಸಿಗೆ ಅಧಿಕಾರಿಯು ಯಾವುದೇ ವಿವರಣೆ ನೀಡಿಲ್ಲವಾದ್ದರಿಂದ ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಮತ್ತೊಂದು ಜ್ಞಾಪನ ನೋಟೀಸ್‌ನ್ನು ಕೂಡಾ ಜಾರಿ ಮಾಡಿ ವಿವರಣೆ ಕೋರಲಾಗಿತ್ತು. ಜ್ಞಾಪನ ನೋಟೀಸಿಗೂ ಸಹಾ ಅಧಿಕಾರಿಯವರು ಯಾವುದೇ ಹೇಳಿಕೆ ಸಲ್ಲಿಸಿರುವುದಿಲ್ಲ.

ಶ್ರೀ ಇ. ಈಶ್ವರನಾಯಕ್, ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಭೂ ಮಂಜೂರಾತಿ) ಇವರು ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಾವಳಿಗಳನುಸಾರ ಆಯಾ ಸಾಲಿನಲ್ಲಿ ಆಸ್ತಿ ಮತ್ತು ಋಣ ಪಟ್ಟಿಗಳನ್ನು ಸಲ್ಲಿಸಿರುವುದಿಲ್ಲ. ಅಧಿಕಾರಿಗೆ ಆಸ್ತಿ ಮತ್ತು ಋಣ ಪಟ್ಟಿ ಸಲ್ಲಿಸುವಂತೆ ಹಲವಾರು ಬಾರಿ ಸೂಚನೆ/ನೋಟೀಸ್ ನೀಡಿ ಸೂಚಿಸಿದ್ದರೂ ಸಹಾ ಅಧಿಕಾರಿಯವರು 1991 ರಿಂದ 2007–08ನೇ ಸಾಲುಗಳ ಆಸ್ತಿ ಮತ್ತು ಋಣಪಟ್ಟಿ ಸಲ್ಲಿಸಿರುವುದಿಲ್ಲ ಹಾಗೂ ಯಾವುದೇ ವಿವರಣೆಯನ್ನು ನೀಡಿರುವುದಿಲ್ಲ. ಆದ್ದರಿಂದ ಅಧಿಕಾರಿಯ ವಿರುದ್ಧ ಹೊರಿಸಲಾದ ನಿಗದಿತವಾಗಿ ಆಸ್ತಿ ಮತ್ತು ಋಣ ಪಟ್ಟಿ ಸಲ್ಲಿಸದಿರುವ ಆರೋಪವು ನಿಸ್ಸಂಶಯವಾಗಿ ಸಾಬೀತಾಗಿರುತ್ತದೆ. ಇದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 3 ಸೇಇವಿ 2010, ಬೆಂಗಳೂರು, ದಿನಾಂಕ: 11–02–2011**

ಶ್ರೀ ಇ. ಈಶ್ವರನಾಯಕ್, ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಭೂ ಮಂಜೂರಾತಿ) ಇವರಿಗೆ ಮೇಲ್ಕಂಡಂತೆ ಸಾಬೀತಾದ ಆರೋಪಗಳಿಗಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 8(iv a)ರ ಅನ್ವಯ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ದಿನಾಂಕ 31–07–2011ರ ವರೆಗೆ ಜಾರಿಯಲ್ಲಿರುವಂತೆ ಇವರ ವೇತನವನ್ನು ಕಾಲಿಕ ವೇತನ ಶ್ರೇಣಿಯಲ್ಲಿ ಒಂದು ಹಂತ ಕೆಳಗೆ ಇಳಿಸಿ ಆದೇಶಿಸಿದೆ ನಂತರ ಅಧಿಕಾರಿಯು ನಿವೃತ್ತಿ ಹೊಂದುವ ತಿಂಗಳಲ್ಲಿ ಅವರ ವೇತನವನ್ನು ಅವರು ದಂಡನೆಗೆ ಮುಂಚೆ ಪಡೆಯುತ್ತಿದ್ದ ವೇತನಕ್ಕೆ ನಿಗದಿಪಡಿಸತಕ್ಕದ್ದು. ದಂಡನೆಯ ಅವಧಿಯಲ್ಲಿ ಅವರ ವೇತನವು ಸ್ಥಿರವಾಗಿರುತ್ತದೆ. ದಂಡನಾವಧಿಯಲ್ಲಿ ಅಧಿಕಾರಿಯು ವೇತನ ಬಡ್ತಿಯನ್ನು ಪಡೆಯಲು ಅರ್ಹರಾಗಿರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಆರ್. ವಿಜಯಾನಂದ ಶರ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ
(ಸೇವೆಗಳು–3)

ಪಿ.ಆರ್. 483

## ಉನ್ನತ ಶಿಕ್ಷಣ ಸಚಿವಾಲಯ

**ವಿಷಯ :** ಶಿಕ್ಷಣ ಮಹಾವಿದ್ಯಾಲಯಗಳಿಗೆ ಮತೀಯ ಅಲ್ಪಸಂಖ್ಯಾತ ಶಿಕ್ಷಣ ಸಂಸ್ಥೆಯ ಸ್ಥಾನಮಾನ ನೀಡುವಂತೆ ಘೋಷಿಸುವ ಬಗ್ಗೆ.

**ಓದಲಾಗಿದೆ :**
1. ನಿರ್ದೇಶಕರು, ಡಿ.ಎಸ್.ಇ.ಆರ್.ಟಿ., ಇವರ ಪತ್ರಗಳ ಸಂಖ್ಯೆ: ಶಿತ3/ಭಾಷಾ ಅಲ್ಪಸಂಖ್ಯಾತ/01/10-11, ದಿ: 23-7-2010 ಮತ್ತು ಶಿತ3/ಭಾಷಾ ಅಲ್ಪಸಂಖ್ಯಾತ/04/10-11, ದಿ: 27-11-2010.
2. ಸರ್ಕಾರದ ಪ್ರಧಾನ ಕಾರ್ಯದರ್ಶಿ, ಉನ್ನತ ಶಿಕ್ಷಣ ಇಲಾಖೆ, ಇವರ ಅಧ್ಯಕ್ಷತೆಯಲ್ಲಿ ದಿ: 25-1-2011 ರಂದು ನಡೆದ ಸಭೆಯ ನಡವಳಿ.
3. ಸಮ ಸಂಖ್ಯೆಯ ಸರ್ಕಾರದ ಪತ್ರ ದಿ: 3-2-2011.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಪತ್ರದಲ್ಲಿ ನಿರ್ದೇಶಕರು (ಸಂ ಮತ್ತು ತ), ಡಿ.ಎಸ್.ಇ.ಆರ್.ಟಿ., ಇವರು ಬಿಲಾಲ್ ಬಿ.ಇಡಿ. ಕಾಲೇಜು, ಬೀದರ್, ಈ ಸಂಸ್ಥೆಗೆ ಮತೀಯ ಅಲ್ಪಸಂಖ್ಯಾತ ಶಿಕ್ಷಣ ಸಂಸ್ಥೆಯ ಸ್ಥಾನಮಾನ ನೀಡುವ ಬಗ್ಗೆ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ. ಸದರಿ ಪ್ರಸ್ತಾವನೆಯನ್ನು ಮೇಲೆ ಓದಲಾದ (2)ರ ದಿ: 25-1-2011 ರಂದು ಸರ್ಕಾರದ ಪ್ರಧಾನ ಕಾರ್ಯದರ್ಶಿ, ಉನ್ನತ ಶಿಕ್ಷಣ ಇಲಾಖೆ, ಅವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ಪರಿಶೀಲಿಸಲಾಯಿತು ಹಾಗೂ ಸದರಿ ಶಿಕ್ಷಣ ಮಹಾವಿದ್ಯಾಲಯಕ್ಕೆ ಮತೀಯ ಅಲ್ಪಸಂಖ್ಯಾತ ಶಿಕ್ಷಣ ಸಂಸ್ಥೆಯ ಸ್ಥಾನಮಾನ ನೀಡಲು ತೀರ್ಮಾನಿಸಲಾಯಿತು. ಅದರಂತೆ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 245 ಯುಆರ್‌ಸಿ 2010 (2), ಬೆಂಗಳೂರು ದಿನಾಂಕ: 9-2-2011**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳ ಹಿನ್ನೆಲೆಯಲ್ಲಿ ಬಿಲಾಲ್ ಬಿ.ಇಡಿ. ಕಾಲೇಜು, ಬೀದರ್, ಈ ಸಂಸ್ಥೆಗೆ ಮತೀಯ ಅಲ್ಪಸಂಖ್ಯಾತ ಶಿಕ್ಷಣ ಸಂಸ್ಥೆಯ ಸ್ಥಾನಮಾನವನ್ನು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ನೀಡಲಾಗಿದೆ.

**ಷರತ್ತುಗಳು:**

1. ಕಾಲೇಜಿಗೆ ನೀಡಲಾಗಿರುವ ಮತೀಯ ಅಲ್ಪಸಂಖ್ಯಾತ ಸ್ಥಾನಮಾನದಂತೆ ಮಂಜೂರಾದ ವಿದ್ಯಾರ್ಥಿ ಪ್ರಮಾಣಕ್ಕೆ ಶೇ. 75 ರಷ್ಟು ಸೀಟುಗಳಲ್ಲಿ ಶೇ. 50 ರಷ್ಟು ಸೀಟುಗಳನ್ನು ಸದರಿ ಅಲ್ಪಸಂಖ್ಯಾತ ವಿದ್ಯಾರ್ಥಿಗಳಿಂದ ಹಾಗೂ ಉಳಿದ ಶೇ. 50 ರಷ್ಟು ಸೀಟುಗಳನ್ನು ಭಾಷಾ ಅಥವಾ ಇತರೆ ಅಲ್ಪಸಂಖ್ಯಾತ ವಿದ್ಯಾರ್ಥಿಗಳಿಂದ ಭರ್ತಿ ಮಾಡತಕ್ಕದ್ದು. ಯಾವುದೇ ಸೀಟುಗಳು ಭರ್ತಿಯಾಗದೇ ಉಳಿದಲ್ಲಿ ಪ್ರವೇಶ ಪರೀಕ್ಷೆ ಮುಕ್ತಾಯವಾಗುವ ಮುನ್ನಾ ಕೇಂದ್ರೀಕೃತ ದಾಖಲಾತಿ ಘಟಕಕ್ಕೆ ಸರಂಡರ್ ಮಾಡತಕ್ಕದ್ದು.
2. ಕಾಲೇಜಿನ ಆಡಳಿತ ಮಂಡಳಿಯು ಮೀಸಲಿರಿಸಿದ ಸೀಟುಗಳಿಗೆ ಮತೀಯ ಅಲ್ಪಸಂಖ್ಯಾತ ವಿದ್ಯಾರ್ಥಿಗಳನ್ನು ದಾಖಲಿಸಿಕೊಂಡಿರುವ ಬಗ್ಗೆ ಮಾಹಿತಿಯನ್ನು ಡಿ.ಎಸ್.ಇ.ಆರ್.ಟಿ. ಗೆ ನೀಡತಕ್ಕದ್ದು.
3. ಕಳೆದ ಮೂರು ವರ್ಷಗಳಲ್ಲಿ ವಿದ್ಯಾರ್ಥಿಗಳ ಪ್ರವೇಶಾತಿಯಲ್ಲಿ 2008-09ನೇ ಸಾಲಿನಲ್ಲಿ 40% ಮಾತ್ರ ಇದ್ದುದರಿಂದ ಇನ್ನು ಮುಂದಿನ ಸಾಲುಗಳಲ್ಲಿ 50% ಕ್ಕಿಂತ ಕಡಿಮೆಯಿಲ್ಲದಂತೆ ಹೊಂದುವುದು.
4. ಮೇಲೆ ತಿಳಿಸಿರುವ ಷರತ್ತುಗಳನ್ನು ಕಾಲೇಜಿನ ಆಡಳಿತ ಮಂಡಳಿಯು ಕಟ್ಟುನಿಟ್ಟಾಗಿ ಪಾಲಿಸತಕ್ಕದ್ದು ಮತ್ತು ಯಾವುದೇ ರೀತಿಯ ಉಲ್ಲಂಘನೆಯನ್ನು ಮಾಡಿದಲ್ಲಿ ಮಂಜೂರು ಮಾಡಲಾದ ಮತೀಯ ಅಲ್ಪಸಂಖ್ಯಾತ ಸ್ಥಾನಮಾನವನ್ನು ಹಿಂಪಡೆಯಲಾಗುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಬಿ.ಎಸ್. ಜಾಪಾಲಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಉನ್ನತ ಶಿಕ್ಷಣ ಇಲಾಖೆ (ವಿಶ್ವವಿದ್ಯಾಲಯ)

ಪಿ.ಆರ್. 484

## ಜಲ ಸಂಪನ್ಮೂಲ ಸಚಿವಾಲಯ

### ತಿದ್ದುಪಡಿ

**ಸಂಖ್ಯೆ: ಸನೀಇ 24 ಡಬ್ಲ್ಯೂಟಿಎನ್ 1988, ಬೆಂಗಳೂರು ದಿನಾಂಕ: 08-02-2011**

ಸರ್ಕಾರದ ಆದೇಶ ಸಂಖ್ಯೆ: ಸನೀಇ 24 ಡಬ್ಲ್ಯೂಟಿಎನ್ 1998, ದಿನಾಂಕ 24-01-2011ರ ವಿಳಾಸ ಭಾಗದಲ್ಲಿ ಕ್ರ.ಸಂ. 4ರ ನಂತರ ಕೆಳಕಂಡಂತೆ ಸೇರಿಸಿ ಓದಿಕೊಳ್ಳತಕ್ಕದ್ದು.

4(ಎ) ನಿರ್ದೇಶಕರು, ಖಜಾನೆ ಇಲಾಖೆ, ಪೋಡಿಯಂ ಬ್ಲಾಕ್, ವಿಶ್ವೇಶ್ವರಯ್ಯ ಗೋಪುರ, ಬೆಂಗಳೂರು.

4(ಬಿ) ನಿರ್ದೇಶಕರು, ಖಜಾನೆ ಗಣಕ ಜಾಲ ನಿರ್ವಹಣೆ ಕೇಂದ್ರ, ಖನಿಜ ಭವನ, ಬೆಂಗಳೂರು.

4(ಸಿ) ಜಿಲ್ಲಾ ಖಜಾನಾಧಿಕಾರಿಗಳು, ರಾಜ್ಯ ಹುಜೂರು ಖಜಾನೆ, ಬೆಂಗಳೂರು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಗೋಪಾಲ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

ಪಿ.ಆರ್. 485

## ಪಶುಸಂಗೋಪನೆ ಮತ್ತು ಮೀನುಗಾರಿಕೆ ಸಚಿವಾಲಯ

**ವಿಷಯ :** ಕೇಂದ್ರ ಪುರಸ್ಕೃತ ಮಾದರಿ ಸಮೀಕ್ಷೆ ಯೋಜನೆಯಡಿ ಹೊಸದಾಗಿ ಸೃಜಿಸಲಾಗಿರುವ 64 ಹುದ್ದೆಗಳ ಕಾರ್ಯನಿರ್ವಹಣಾ ಕಛೇರಿ ಹಾಗೂ ಕಾರ್ಯವ್ಯಾಪ್ತಿಗೆ ಬರುವ ಜಿಲ್ಲೆಗಳ ಹಂಚಿಕೆ.

**ಓದಲಾಗಿದೆ :** (1) ಸರ್ಕಾರದ ಆದೇಶ ಸಂಖ್ಯೆ: ಪಸಂಮೀ 91 ಪಪಾಯೋ 2008. ದಿನಾಂಕ: 23–8–2010.

(2) ಪತ್ರ ಸಂಖ್ಯೆ: ಪಪಾಇ/ಅಂಅಂ/ಸಿಬ್ಬಂದಿ/ವಿವ–40/2010–11, ದಿನಾಂಕ: 09–11–2010.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಆದೇಶದಲ್ಲಿ ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆಯಲ್ಲಿನ ಸಾಂಖ್ಯಿಕ ಶಾಖೆಗೆ ಯೋಜನಾ ಶೀರ್ಷಿಕೆಯಡಿ ಮಂಜೂರಾಗಿದ್ದ 69 ಹುದ್ದೆಗಳನ್ನು ಕೇಂದ್ರ ಸರ್ಕಾರದ ಮಾರ್ಗಸೂಚಿಯನ್ವಯ 64 ಹುದ್ದೆಗಳನ್ನು ಸೃಜಿಸಲಾಗಿದೆ. ಸದರಿ ಆದೇಶದಲ್ಲಿ ಭಾರತ ಸರ್ಕಾರದ ಮಾರ್ಗಸೂಚಿಯನ್ವಯ ಜಂಟಿ ನಿರ್ದೇಶಕರು (ಅಂಕಿ ಅಂಶ) ಹುದ್ದೆಯನ್ನು ಯೋಜನೇತರ ಅಡಿಯಿಂದ ಯೋಜನೆಯಡಿಗೆ ವರ್ಗಾಯಿಸಿರುವುದರಿಂದ, ಜಂಟಿ ನಿರ್ದೇಶಕರು (ಅಂಕಿ ಅಂಶ) ಇವರಿಗೆ ಹಾಲಿ ಇರುವ ಅಧಿಕಾರ ಮುಂದುವರೆಸಲು ಹಾಗೂ ಯೋಜನೆಯಡಿ ಮಂಜೂರಾದ ಇತರೆ ಹುದ್ದೆಗಳಾದ 02 ಉಪ ನಿರ್ದೇಶಕರು (ಅಂಕಿ ಅಂಶ) ಹುದ್ದೆ, 08 ಸಹಾಯಕ ನಿರ್ದೇಶಕರು (ಸಾಂಖ್ಯಿಕ) ಹುದ್ದೆ, 15 ಸಹಾಯಕ ಸಾಂಖ್ಯಿಕ ಅಧಿಕಾರಿ ಹುದ್ದೆ, 02 ಸಾಂಖ್ಯಿಕ ನಿರೀಕ್ಷಕರ ಹುದ್ದೆ ಮತ್ತು 36 ಪಶುವೈದ್ಯಕೀಯ ಪರೀಕ್ಷಕರ ಹುದ್ದೆಗಳನ್ನು ಮತ್ತು ಮಾದರಿ ಸಮೀಕ್ಷೆ ಯೋಜನೆಯಡಿ ಈಗಾಗಲೇ 4 ವಿಭಾಗ ಮಟ್ಟದಲ್ಲಿ ಕಾರ್ಯ ನಿರ್ವಹಿಸುತ್ತಿರುವ ಪಶುವೈದ್ಯಾಧಿಕಾರಿಗಳ ಹುದ್ದೆಗಳು ಯೋಜನೇತರಡಿಯಲ್ಲಿಯೇ ಮುಂದುವರೆಯುವುದರಿಂದ ಅವರುಗಳಿಗೆ ಹಾಲಿ ಇರುವ ಅಧಿಕಾರ ಮುಂದುವರೆಸಲು ಹಾಗೂ ಸದರಿ ಇತರೆ ಎಲ್ಲಾ ಹುದ್ದೆಗಳ ಕಾರ್ಯನಿರ್ವಹಣಾ ಕಚೇರಿ ಹಾಗೂ ಕಾರ್ಯವ್ಯಾಪ್ತಿಗೆ ಬರುವ ಜಿಲ್ಲೆಗಳಿಗೆ ಹಂಚಿಕೆಯನ್ನು ಮೇಲೆ (2)ರಲ್ಲಿ ಓದಲಾದ ಪತ್ರದೊಂದಿಗೆ ಲಗತ್ತಿಸಿರುವ ಅನುಬಂಧ–Iರಲ್ಲಿ ವಿವರಿಸಿರುವಂತೆ ಆದೇಶ ಹೊರಡಿಸಬೇಕೆಂದು ಆಯುಕ್ತರು, ಪಶುಪಾಲನಾ ಮತ್ತು ಪಶು ವೈದ್ಯಕೀಯ ಸೇವಾ ಇಲಾಖೆರವರು ಕೋರಿರುತ್ತಾರೆ.

**ಸರ್ಕಾರಿ ಆದೇಶ ಸಂಖ್ಯೆ: ಪಸಂಮೀ 56 ಪಪಾಯೋ 2010, ಬೆಂಗಳೂರು, ದಿನಾಂಕ: 08–2–2011**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದ ಸರ್ಕಾರ, ಆದೇಶ ಸಂಖ್ಯೆ:ಪಸಂಮೀ 91 ಪಪಾಯೋ 2008, ದಿನಾಂಕ: 23–08–2010ರ ಅನ್ವಯ ಕೇಂದ್ರ ಪುರಸ್ಕೃತ ಮಾದರಿ ಸಮೀಕ್ಷೆ ಯೋಜನೆಯನ್ನು ರಾಜ್ಯದ ವಿವಿಧ ಜಿಲ್ಲೆಗಳಿಗೆ ವಿಸ್ತರಿಸುವ ಸಲುವಾಗಿ ಕೇಂದ್ರ ಪುರಸ್ಕೃತ ಮಾದರಿ ಸಮೀಕ್ಷೆ ಯೋಜನೆಯಡಿ ಹೊಸದಾಗಿ ಸೃಜಿಸಲಾಗಿರುವ 64 ಹುದ್ದೆಗಳನ್ನು ಯೋಜನೆಯಡಿಯಲ್ಲಿ ಹಾಗೂ 4 ವಿಭಾಗ ಮಟ್ಟಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವ ಪಶುವೈದ್ಯಾಧಿಕಾರಿಗಳ ಹುದ್ದೆಗಳನ್ನು ಯೋಜನೇತರಡಿ ಮುಂದುವರೆಸಿ, ಈ ಆದೇಶದೊಂದಿಗೆ ಲಗತ್ತಿಸಿರುವ ಅನುಬಂಧ–Iರಲ್ಲಿ ವಿವರಿಸಿರುವಂತೆ ಕಾರ್ಯನಿರ್ವಹಣಾ ಕಛೇರಿ ಹಾಗೂ ಕಾರ್ಯವ್ಯಾಪ್ತಿಗೆ ಬರುವ ಜಿಲ್ಲೆಗಳಿಗೆ ಮರುಹಂಚಿಕೆ ಮಾಡಿ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಕೆ. ಶ್ರೀನಿವಾಸಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ

(ಪಶುಸಂಗೋಪನೆ)

## ಅನುಬಂಧ–I

ಸರ್ಕಾರಿ ಆದೇಶ ಸಂಖ್ಯೆ: ಪಸಂಮೀ 91 ಪಪಾಯೋ 2008, ಬೆಂಗಳೂರು, ದಿನಾಂಕ: 23–08–2010 ರನ್ವಯ ಕೇಂದ್ರ ಪುರಸ್ಕೃತ ಮಾದರಿ ಸಮೀಕ್ಷೆ ಯೋಜನೆಯನ್ನು ರಾಜ್ಯದ ವಿವಿಧ ಜಿಲ್ಲೆಗಳಿಗೆ ವಿಸ್ತರಿಸುವ ಸಲುವಾಗಿ ಯೋಜನಾ ಲೆಕ್ಕಶೀರ್ಷಿಕೆ 2403–00–113–0–02 ಹೊಸದಾಗಿ ಸೃಜಿಸಲಾಗಿರುವ 64 ಹುದ್ದೆಗಳ ಕಾರ್ಯನಿರ್ವಹಣಾ ಕಛೇರಿ ಹಾಗೂ ಕಾರ್ಯವ್ಯಾಪ್ತಿಯ ಜಿಲ್ಲೆಗಳನ್ನು ಈ ಕೆಳಕಂಡಂತೆ ವಿವರಿಸಲಾಗಿದೆ.

| ಕ್ರ.ಸಂ. | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ | ಕಾರ್ಯನಿರ್ವಹಣಾ ವ್ಯಾಪ್ತಿ | ಕೆಲಸ ನಿರ್ವಹಿಸಬೇಕಾದ ಕಛೇರಿ |
|---|---|---|---|---|
| **I ಜಂಟಿ ನಿರ್ದೇಶಕರು (ಅಂಕಿಅಂಶ) ಕಛೇರಿ, ಪಶುಪಾಲನಾ ಮತ್ತು ಪಶುವೈದ್ಯಕೀಯ ಸೇವಾ ಇಲಾಖೆ ಬೆಂಗಳೂರು:** | | | | |
| 1 | ಜಂಟಿ ನಿರ್ದೇಶಕರು (ಅಂಕಿಅಂಶ) (ಈ ಹುದ್ದೆಯನ್ನು ಭಾರತ ಸರ್ಕಾರದ ಮಾರ್ಗಸೂಚಿಯನ್ವಯ ಯೋಜನೇತರಡಿಯಿಂದ ಯೋಜನೆಯಡಿಗೆ ವರ್ಗಾಯಿಸಲಾಗಿದೆ). | 01 | ಜಂಟಿ ನಿರ್ದೇಶಕರು (ಅಂಕಿಅಂಶ) ರವರ ಕಛೇರಿ, ಪಶುಪಾಲನ ಮತ್ತು ಪಶುವೈದ್ಯಕೀಯ ಸೇವಾ ಇಲಾಖೆ, ಬೆಂಗಳೂರು.<br>ಜಂಟಿ ನಿರ್ದೇಶಕರು (ಅಂಕಿಅಂಶ), ಪಶುಪಾಲನಾ ಮತ್ತು ಪಶುವೈದ್ಯಕೀಯ ಸೇವಾ ಇಲಾಖೆ, ಬೆಂಗಳೂರು ರವರಿಗೆ ಹಾಲಿ ಇರುವ ಅಧಿಕಾರ ಮುಂದುವರೆಯುತ್ತದೆ. | |
| 2 | ಉಪ ನಿರ್ದೇಶಕರು (ಅಂಕಿಅಂಶ) | 02 | ಜಂಟಿ ನಿರ್ದೇಶಕರು (ಅಂಕಿಅಂಶ) ರವರ ಅಧೀನದಲ್ಲಿ ಕಾರ್ಯನಿರ್ವಹಿಸುವುದು | ಜಂಟಿ ನಿರ್ದೇಶಕರು (ಅಂಕಿಅಂಶ) ಕಛೇರಿ, ಪಶುಪಾಲನಾ ಮತ್ತು ಪಶುವೈದ್ಯಕೀಯ ಸೇವಾ ಇಲಾಖೆ, ಬೆಂಗಳೂರು. |
| 3 | ಸಾಂಖ್ಯಿಕ ನಿರೀಕ್ಷಕರು | 02 | ಜಂಟಿ ನಿರ್ದೇಶಕರು (ಅಂಕಿಅಂಶ) ರವರ ಅಧೀನದಲ್ಲಿ ಕಾರ್ಯನಿರ್ವಹಿಸುವುದು | ಜಂಟಿ ನಿರ್ದೇಶಕರು (ಅಂಕಿಅಂಶ) ಕಛೇರಿ, ಪಶುಪಾಲನಾ ಮತ್ತು ಪಶು ವೈದ್ಯಕೀಯ ಸೇವಾ ಇಲಾಖೆ, ಬೆಂಗಳೂರು. |

| | | | | |
|---|---|---|---|---|
| 4 | ಪಶುವೈದ್ಯಕೀಯ ಪರೀಕ್ಷಕರು | 02 | ಜಂಟಿ ನಿರ್ದೇಶಕರು (ಅಂಕಿಅಂಶ) ರವರ ಅಧೀನದಲ್ಲಿ ಕಾರ್ಯನಿರ್ವಹಿಸುವುದು | ಜಂಟಿ ನಿರ್ದೇಶಕರು (ಅಂಕಿಅಂಶ) ಕಛೇರಿ, ಪಶುಪಾಲನಾ ಮತ್ತು ಪಶು ವೈದ್ಯಕೀಯ ಸೇವಾ ಇಲಾಖೆ, ಬೆಂಗಳೂರು. |

| ಕ್ರ.ಸಂ. | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ | ಕಾರ್ಯನಿರ್ವಹಣಾ ವ್ಯಾಪ್ತಿಗೆ ಬರುವ ಜಿಲ್ಲೆಗಳು | ಕೆಲಸ ನಿರ್ವಹಿಸಬೇಕಾದ ಕಛೇರಿ |
|---|---|---|---|---|
| **II ಬೆಂಗಳೂರು ವಿಭಾಗ:** | | | | |
| 1 | ಪಶುವೈದ್ಯಾಧಿಕಾರಿ (ಯೋಜನೇತರ ಹುದ್ದೆ) | 01 | ಪಶುವೈದ್ಯಾಧಿಕಾರಿಗಳ ಕಛೇರಿ, ಮಾದರಿ ಸಮೀಕ್ಷೆ ಯೋಜನೆ, ಪಶುಪಾಲನಾ ಮತ್ತು ಪಶುವೈದ್ಯಕೀಯ ಸೇವಾ ಇಲಾಖೆ, ಬೆಂಗಳೂರು ವಿಭಾಗ, ಬೆಂಗಳೂರು. ಪಶುವೈದ್ಯಾಧಿಕಾರಿ, ಮಾದರಿ ಸಮೀಕ್ಷೆ ಯೋಜನೆ, ಪಶುಪಾಲನಾ ಮತ್ತು ಪಶುವೈದ್ಯಕೀಯ ಸೇವಾ ಇಲಾಖೆ, ಬೆಂಗಳೂರು ವಿಭಾಗ, ಬೆಂಗಳೂರು ರವರಿಗೆ ಹಾಲಿ ಇರುವ ಅಧಿಕಾರ ಮುಂದುವರೆಯುತ್ತದೆ. | |
| 2 | ಸಹಾಯಕ ನಿರ್ದೇಶಕರು (ಸಾಂಖ್ಯಿಕ) | 01 | ಬೆಂಗಳೂರು ನಗರ, ಬೆಂಗಳೂರು (ಗ್ರಾ), ರಾಮನಗರ, ಕೋಲಾರ, ಚಿಕ್ಕಬಳ್ಳಾಪುರ | ಉಪ ನಿರ್ದೇಶಕರ ಕಛೇರಿ, ಪಶುಪಾಲನಾ ಮತ್ತು ಪಶು ವೈದ್ಯಕೀಯ ಸೇವಾ ಇಲಾಖೆ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಹೆಬ್ಬಾಳ, ಬೆಂಗಳೂರು |
| | | 01 | ತುಮಕೂರು, ಚಿತ್ರದುರ್ಗ, ಶಿವಮೊಗ್ಗ, ದಾವಣಗೆರೆ | ಉಪ ನಿರ್ದೇಶಕರ ಕಛೇರಿ, ಪಶುಪಾಲನಾ ಮತ್ತು ಪಶು ವೈದ್ಯಕೀಯ ಸೇವಾ ಇಲಾಖೆ, ಚಿತ್ರದುರ್ಗ |
| 3 | ಸಹಾಯಕ ಸಾಂಖ್ಯಿಕ ಅಧಿಕಾರಿ | 01 | ಬೆಂಗಳೂರು ನಗರ, ಬೆಂಗಳೂರು (ಗ್ರಾ), ರಾಮಗನಗರ | ಪಶುವೈದ್ಯಾಧಿಕಾರಿಗಳ ಕಛೇರಿ, ಮಾದರಿ ಸಮೀಕ್ಷೆ ಯೋಜನೆ, ಪಶುಪಾಲನಾ ಮತ್ತು ಪಶು ವೈದ್ಯಕೀಯ ಸೇವಾ ಇಲಾಖೆ, ಬೆಂಗಳೂರು. |
| | | 01 | ಕೋಲಾರ, ಚಿಕ್ಕಬಳ್ಳಾಪುರ | ಉಪನಿರ್ದೇಶಕರ ಕಛೇರಿ, ಪಶುಪಾಲನಾ ಮತ್ತು ಪಶು ವೈದ್ಯಕೀಯ ಸೇವಾ ಇಲಾಖೆ, ಕೋಲಾರ. |
| | | 01 | ತುಮಕೂರು, ಚಿತ್ರದುರ್ಗ. | ಉಪ ನಿರ್ದೇಶಕರ ಕಛೇರಿ, ಪಶುಪಾಲನಾ ಮತ್ತು ಪಶು ವೈದ್ಯಕೀಯ ಸೇವಾ ಇಲಾಖೆ, ತುಮಕೂರು. |
| | | 01 | ಶಿವಮೊಗ್ಗ, ದಾವಣಗೆರೆ. | ಉಪ ನಿರ್ದೇಶಕರ ಕಛೇರಿ, ಪಶುಪಾಲನಾ ಮತ್ತು ಪಶು ವೈದ್ಯಕೀಯ ಸೇವಾ ಇಲಾಖೆ, ಶಿವಮೊಗ್ಗ. |
| 4 | ಪಶುವೈದ್ಯಕೀಯ ಪರೀಕ್ಷಕರು | 01 | ಬೆಂಗಳೂರು | ಪಶುವೈದ್ಯಾಧಿಕಾರಿಗಳ ಕಛೇರಿ, ಮಾದರಿ ಸಮೀಕ್ಷೆ ಯೋಜನೆ, ಪಶುಪಾಲನಾ ಮತ್ತು ಪಶು ವೈದ್ಯಕೀಯ ಸೇವಾ ಇಲಾಖೆ, ಬೆಂಗಳೂರು. |
| | | 01 | ಬೆಂಗಳೂರು ನಗರ | ಉಪ ನಿರ್ದೇಶಕರ ಕಛೇರಿ, ಪಶುಪಾಲನಾ ಮತ್ತು ಪಶು ವೈದ್ಯಕೀಯ ಸೇವಾ ಇಲಾಖೆ, ಬೆಂಗಳೂರು ನಗರ ಜಿಲ್ಲೆ, ಹೆಬ್ಬಾಳ, ಬೆಂಗಳೂರು. |
| | | 01 | ಬೆಂಗಳೂರು ಗ್ರಾಮಾಂತರ | ಉಪ ನಿರ್ದೇಶಕರ ಕಛೇರಿ, ಪಶುಪಾಲನಾ ಮತ್ತು ಪಶು ವೈದ್ಯಕೀಯ ಸೇವಾ ಇಲಾಖೆ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಹೆಬ್ಬಾಳ, ಬೆಂಗಳೂರು. |
| | | 01 | ರಾಮನಗರ | ಉಪ ನಿರ್ದೇಶಕರ ಕಛೇರಿ, ಪಶುಪಾಲನಾ ಮತ್ತು ಪಶು ವೈದ್ಯಕೀಯ ಸೇವಾ ಇಲಾಖೆ, ರಾಮನಗರ. |
| | | 01 | ಕೋಲಾರ | ಉಪ ನಿರ್ದೇಶಕರ ಕಛೇರಿ, ಪಶುಪಾಲನಾ ಮತ್ತು ಪಶು ವೈದ್ಯಕೀಯ ಸೇವಾ ಇಲಾಖೆ, ಕೋಲಾರ. |

| | | | | |
|---|---|---|---|---|
| | | 01 | ಚಿಕ್ಕಬಳ್ಳಾಪುರ | ಉಪ ನಿರ್ದೇಶಕರ ಕಛೇರಿ, ಪಶುಪಾಲನಾ ಮತ್ತು ಪಶು ವೈದ್ಯಕೀಯ ಸೇವಾ ಇಲಾಖೆ, ಚಿಕ್ಕಬಳ್ಳಾಪುರ. |
| | | 01 | ತುಮಕೂರು | ಉಪ ನಿರ್ದೇಶಕರ ಕಛೇರಿ, ಪಶುಪಾಲನಾ ಮತ್ತು ಪಶು ವೈದ್ಯಕೀಯ ಸೇವಾ ಇಲಾಖೆ, ತುಮಕೂರು. |
| | | 01 | ಚಿತ್ರದುರ್ಗ | ಉಪ ನಿರ್ದೇಶಕರ ಕಛೇರಿ, ಪಶುಪಾಲನಾ ಮತ್ತು ಪಶು ವೈದ್ಯಕೀಯ ಸೇವಾ ಇಲಾಖೆ, ಚಿತ್ರದುರ್ಗ. |
| | | 01 | ಶಿವಮೊಗ್ಗ | ಉಪ ನಿರ್ದೇಶಕರ ಕಛೇರಿ, ಪಶುಪಾಲನಾ ಮತ್ತು ಪಶು ವೈದ್ಯಕೀಯ ಸೇವಾ ಇಲಾಖೆ, ಶಿವಮೊಗ್ಗ. |
| | | 01 | ದಾವಣಗೆರೆ | ಉಪ ನಿರ್ದೇಶಕರ ಕಛೇರಿ, ಪಶುಪಾಲನಾ ಮತ್ತು ಪಶು ವೈದ್ಯಕೀಯ ಸೇವಾ ಇಲಾಖೆ, ದಾವಣಗೆರೆ. |

| ಕ್ರ.ಸಂ. | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ | ಕಾರ್ಯನಿರ್ವಹಣಾ ವ್ಯಾಪ್ತಿಗೆ ಬರುವ ಜಿಲ್ಲೆಗಳು | ಕೆಲಸ ನಿರ್ವಹಿಸಬೇಕಾದ ಕಛೇರಿ ಹಾಗೂ ಕೇಂದ್ರ ಸ್ಥಾನ |
|---|---|---|---|---|
| **III ಮೈಸೂರು ವಿಭಾಗ:** | | | | |
| 1 | ಪಶುವೈದ್ಯಾಧಿಕಾರಿ (ಯೋಜನೇತರ ಹುದ್ದೆ) | 01 | ಪಶುವೈದ್ಯಾಧಿಕಾರಿಗಳ ಕಛೇರಿ, ಮಾದರಿ ಸಮೀಕ್ಷೆ ಯೋಜನೆ, ಪಶುಪಾಲನಾ ಮತ್ತು ಪಶುವೈದ್ಯಕೀಯ ಸೇವಾ ಇಲಾಖೆ, ಮೈಸೂರು ವಿಭಾಗ, ಮೈಸೂರು. ಪಶುವೈದ್ಯಾಧಿಕಾರಿ, ಮಾದರಿ ಸಮೀಕ್ಷೆ ಯೋಜನೆ, ಪಶುಪಾಲನಾ ಮತ್ತು ಪಶುವೈದ್ಯಕೀಯ ಸೇವಾ ಇಲಾಖೆ, ಮೈಸೂರು ವಿಭಾಗ, ಮೈಸೂರು ರವರಿಗೆ ಹಾಲಿ ಇರುವ ಅಧಿಕಾರ ಮುಂದುವರೆಯುತ್ತದೆ. | |
| 2 | ಸಹಾಯಕ ನಿರ್ದೇಶಕರು (ಸಾಂಖ್ಯಿಕ) | 01 | ಮೈಸೂರು, ಕೊಡಗು, ಮಂಡ್ಯ, ಚಾಮರಾಜನಗರ | ಉಪ ನಿರ್ದೇಶಕರ ಕಛೇರಿ, ಪಶುಪಾಲನಾ ಮತ್ತು ಪಶು ವೈದ್ಯಕೀಯ ಸೇವಾ ಇಲಾಖೆ, ಮಂಡ್ಯ |
| | | 01 | ಚಿಕ್ಕಮಗಳೂರು, ಹಾಸನ, ಮಂಗಳೂರು, ಉಡುಪಿ. | ಉಪ ನಿರ್ದೇಶಕರ ಕಛೇರಿ, ಪಶುಪಾಲನಾ ಮತ್ತು ಪಶು ವೈದ್ಯಕೀಯ ಸೇವಾ ಇಲಾಖೆ, ಹಾಸನ. |
| 3 | ಸಹಾಯಕ ಸಾಂಖ್ಯಿಕ ಅಧಿಕಾರಿ | 01 | ಮೈಸೂರು, ಕೊಡಗು, | ಪಶುವೈದ್ಯಾಧಿಕಾರಿಗಳ ಕಛೇರಿ, ಮಾದರಿ ಸಮೀಕ್ಷೆ ಯೋಜನೆ, ಪಶುಪಾಲನಾ ಮತ್ತು ಪಶುವೈದ್ಯಕೀಯ ಸೇವಾ ಇಲಾಖೆ, ಮೈಸೂರು. |
| | | 01 | ಮಂಡ್ಯ, ಚಾಮರಾಜನಗರ. | ಉಪ ನಿರ್ದೇಶಕರ ಕಛೇರಿ, ಪಶುಪಾಲನಾ ಮತ್ತು ಪಶು ವೈದ್ಯಕೀಯ ಸೇವಾ ಇಲಾಖೆ, ಚಾಮರಾಜನಗರ. |
| | | 01 | ಚಿಕ್ಕಮಗಳೂರು, ಹಾಸನ. | ಉಪ ನಿರ್ದೇಶಕರ ಕಛೇರಿ, ಪಶುಪಾಲನಾ ಮತ್ತು ಪಶು ವೈದ್ಯಕೀಯ ಸೇವಾ ಇಲಾಖೆ, ಚಿಕ್ಕಮಗಳೂರು. |
| | | 01 | ಮಂಗಳೂರು, ಉಡುಪಿ | ಉಪ ನಿರ್ದೇಶಕರ ಕಛೇರಿ, ಪಶುಪಾಲನಾ ಮತ್ತು ಪಶು ವೈದ್ಯಕೀಯ ಸೇವಾ ಇಲಾಖೆ, ಮಂಗಳೂರು. |
| 4 | ಪಶುವೈದ್ಯಕೀಯ ಪರೀಕ್ಷಕರು | 01 | ಮೈಸೂರು | ಪಶುವೈದ್ಯಾಧಿಕಾರಿಗಳ ಕಛೇರಿ, ಮಾದರಿ ಸಮೀಕ್ಷೆ ಯೋಜನೆ, ಪಶುಪಾಲನಾ ಮತ್ತು ಪಶುವೈದ್ಯಕೀಯ ಸೇವಾ ಇಲಾಖೆ, ಮೈಸೂರು. |

| | | | | |
|---|---|---|---|---|
| | | 01 | ಮೈಸೂರು | ಉಪ ನಿರ್ದೇಶಕರ ಕಛೇರಿ, ಪಶುಪಾಲನಾ ಮತ್ತು ಪಶು ವೈದ್ಯಕೀಯ ಸೇವಾ ಇಲಾಖೆ, ಮೈಸೂರು. |
| | | 01 | ಕೊಡಗು | ಉಪ ನಿರ್ದೇಶಕರ ಕಛೇರಿ, ಪಶುಪಾಲನಾ ಮತ್ತು ಪಶು ವೈದ್ಯಕೀಯ ಸೇವಾ ಇಲಾಖೆ, ಕೊಡಗು. |
| | | 01 | ಮಂಡ್ಯ | ಉಪ ನಿರ್ದೇಶಕರ ಕಛೇರಿ, ಪಶುಪಾಲನಾ ಮತ್ತು ಪಶು ವೈದ್ಯಕೀಯ ಸೇವಾ ಇಲಾಖೆ, ಮಂಡ್ಯ. |
| | | 01 | ಚಾಮರಾಜನಗರ | ಉಪ ನಿರ್ದೇಶಕರ ಕಛೇರಿ, ಪಶುಪಾಲನಾ ಮತ್ತು ಪಶು ವೈದ್ಯಕೀಯ ಸೇವಾ ಇಲಾಖೆ, ಚಾಮರಾಜನಗರ. |
| | | 01 | ಚಿಕ್ಕಮಗಳೂರು | ಉಪ ನಿರ್ದೇಶಕರ ಕಛೇರಿ, ಪಶುಪಾಲನಾ ಮತ್ತು ಪಶು ವೈದ್ಯಕೀಯ ಸೇವಾ ಇಲಾಖೆ, ಚಿಕ್ಕಮಗಳೂರು. |
| | | 01 | ಹಾಸನ | ಉಪ ನಿರ್ದೇಶಕರ ಕಛೇರಿ, ಪಶುಪಾಲನಾ ಮತ್ತು ಪಶು ವೈದ್ಯಕೀಯ ಸೇವಾ ಇಲಾಖೆ, ಹಾಸನ. |
| | | 01 | ಮಂಗಳೂರು | ಉಪ ನಿರ್ದೇಶಕರ ಕಛೇರಿ, ಪಶುಪಾಲನಾ ಮತ್ತು ಪಶು ವೈದ್ಯಕೀಯ ಸೇವಾ ಇಲಾಖೆ, ಮಂಗಳೂರು. |
| | | 01 | ಉಡುಪಿ | ಉಪ ನಿರ್ದೇಶಕರ ಕಛೇರಿ, ಪಶುಪಾಲನಾ ಮತ್ತು ಪಶು ವೈದ್ಯಕೀಯ ಸೇವಾ ಇಲಾಖೆ, ಉಡುಪಿ. |
| **IV ಗುಲ್ಬರ್ಗಾ ವಿಭಾಗ:** | | | | |
| 1 | ಪಶುವೈದ್ಯಾಧಿಕಾರಿ (ಯೋಜನೇತರ ಹುದ್ದೆ) | 01 | ಪಶುವೈದ್ಯಾಧಿಕಾರಿಗಳ ಕಛೇರಿ, ಮಾದರಿ ಸಮೀಕ್ಷೆ ಯೋಜನೆ, ಪಶುಪಾಲನಾ ಮತ್ತು ಪಶುವೈದ್ಯಕೀಯ ಸೇವಾ ಇಲಾಖೆ, ಗುಲ್ಬರ್ಗಾ ವಿಭಾಗ, ಗುಲ್ಬರ್ಗಾ.<br>ಪಶುವೈದ್ಯಾಧಿಕಾರಿ, ಮಾದರಿ ಸಮೀಕ್ಷೆ ಯೋಜನೆ, ಪಶುಪಾಲನಾ ಮತ್ತು ಪಶುವೈದ್ಯಕೀಯ ಸೇವಾ ಇಲಾಖೆ, ಗುಲ್ಬರ್ಗಾ ವಿಭಾಗ, ಗುಲ್ಬರ್ಗಾ ರವರಿಗೆ ಹಾಲಿ ಇರುವ ಅಧಿಕಾರ ಮುಂದುವರೆಯುತ್ತದೆ. | |
| 2 | ಸಹಾಯಕ ನಿರ್ದೇಶಕರು (ಸಾಂಖ್ಯಿಕ) | 01 | ಗುಲ್ಬರ್ಗಾ, ಬೀದರ್, ಯಾದಗಿರಿ | ಉಪ ನಿರ್ದೇಶಕರ ಕಛೇರಿ, ಪಶುಪಾಲನಾ ಮತ್ತು ಪಶುವೈದ್ಯಕೀಯ ಸೇವಾ ಇಲಾಖೆ, ಬೀದರ್ |
| | | 01 | ರಾಯಚೂರು, ಬಳ್ಳಾರಿ, ಕೊಪ್ಪಳ | ಉಪ ನಿರ್ದೇಶಕರ ಕಛೇರಿ, ಪಶುಪಾಲನಾ ಮತ್ತು ಪಶುವೈದ್ಯಕೀಯ ಸೇವಾ ಇಲಾಖೆ, ಕೊಪ್ಪಳ |
| 3 | ಸಹಾಯಕ ಸಾಂಖ್ಯಿಕ ಅಧಿಕಾರಿ | 01 | ಗುಲ್ಬರ್ಗಾ, ಬೀದರ್ | ಪಶುವೈದ್ಯಾಧಿಕಾರಿಗಳ ಕಛೇರಿ, ಮಾದರಿ ಸಮೀಕ್ಷೆ ಯೋಜನೆ, ಪಶುಪಾಲನಾ ಮತ್ತು ಪಶುವೈದ್ಯಕೀಯ ಸೇವಾ ಇಲಾಖೆ, ಗುಲ್ಬರ್ಗಾ. |
| | | 01 | ಯಾದಗಿರಿ, ರಾಯಚೂರು | ಉಪ ನಿರ್ದೇಶಕರ ಕಛೇರಿ, ಪಶುಪಾಲನಾ ಮತ್ತು ಪಶು ವೈದ್ಯಕೀಯ ಸೇವಾ ಇಲಾಖೆ, ರಾಯಚೂರು. |
| | | 01 | ಬಳ್ಳಾರಿ, ಕೊಪ್ಪಳ | ಉಪ ನಿರ್ದೇಶಕರ ಕಛೇರಿ, ಪಶುಪಾಲನಾ ಮತ್ತು ಪಶು ವೈದ್ಯಕೀಯ ಸೇವಾ ಇಲಾಖೆ, ಬಳ್ಳಾರಿ. |
| 4 | ಪಶುವೈದ್ಯಕೀಯ ಪರೀಕ್ಷಕರು | 01 | ಗುಲ್ಬರ್ಗಾ | ಪಶುವೈದ್ಯಾಧಿಕಾರಿಗಳ ಕಛೇರಿ, ಮಾದರಿ ಸಮೀಕ್ಷೆ ಯೋಜನೆ, ಪಶುಪಾಲನಾ ಮತ್ತು ಪಶು ವೈದ್ಯಕೀಯ ಸೇವಾ ಇಲಾಖೆ, ಗುಲ್ಬರ್ಗಾ. |

| | | | | |
|---|---|---|---|---|
| | | 01 | ಗುಲ್ಬರ್ಗಾ | ಉಪ ನಿರ್ದೇಶಕರ ಕಛೇರಿ, ಪಶುಪಾಲನಾ ಮತ್ತು ಪಶು ವೈದ್ಯಕೀಯ ಸೇವಾ ಇಲಾಖೆ, ಗುಲ್ಬರ್ಗಾ. |
| | | 01 | ಬೀದರ್ | ಉಪ ನಿರ್ದೇಶಕರ ಕಛೇರಿ, ಪಶುಪಾಲನಾ ಮತ್ತು ಪಶು ವೈದ್ಯಕೀಯ ಸೇವಾ ಇಲಾಖೆ, ಬೀದರ್. |
| | | 01 | ಯಾದಗಿರಿ. | ಉಪ ನಿರ್ದೇಶಕರ ಕಛೇರಿ, ಪಶುಪಾಲನಾ ಮತ್ತು ಪಶು ವೈದ್ಯಕೀಯ ಸೇವಾ ಇಲಾಖೆ, ಯಾದಗಿರಿ. |
| | | 01 | ರಾಯಚೂರು | ಉಪ ನಿರ್ದೇಶಕರ ಕಛೇರಿ, ಪಶುಪಾಲನಾ ಮತ್ತು ಪಶು ವೈದ್ಯಕೀಯ ಸೇವಾ ಇಲಾಖೆ, ರಾಯಚೂರು. |
| | | 01 | ಬಳ್ಳಾರಿ | ಉಪ ನಿರ್ದೇಶಕರ ಕಛೇರಿ, ಪಶುಪಾಲನಾ ಮತ್ತು ಪಶು ವೈದ್ಯಕೀಯ ಸೇವಾ ಇಲಾಖೆ, ಬಳ್ಳಾರಿ. |
| | | 01 | ಕೊಪ್ಪಳ | ಉಪ ನಿರ್ದೇಶಕರ ಕಛೇರಿ, ಪಶುಪಾಲನಾ ಮತ್ತು ಪಶು ವೈದ್ಯಕೀಯ ಸೇವಾ ಇಲಾಖೆ, ಕೊಪ್ಪಳ. |
| **V ಬೆಳಗಾವಿ ವಿಭಾಗ:** | | | | |
| 1 | ಪಶುವೈದ್ಯಾಧಿಕಾರಿ (ಯೋಜನೇತರ ಹುದ್ದೆ) | 01 | ಪಶುವೈದ್ಯಾಧಿಕಾರಿಗಳ ಕಛೇರಿ, ಮಾದರಿ ಸಮೀಕ್ಷೆ ಯೋಜನೆ, ಪಶುಪಾಲನಾ ಮತ್ತು ಪಶುವೈದ್ಯಕೀಯ ಸೇವಾ ಇಲಾಖೆ, ಬೆಳಗಾವಿ ವಿಭಾಗ, ಬೆಳಗಾವಿ.<br>ಪಶುವೈದ್ಯಾಧಿಕಾರಿ, ಮಾದರಿ ಸಮೀಕ್ಷೆ ಯೋಜನೆ, ಪಶುಪಾಲನಾ ಮತ್ತು ಪಶುವೈದ್ಯಕೀಯ ಸೇವಾ ಇಲಾಖೆ, ಬೆಳಗಾವಿ ವಿಭಾಗ, ಬೆಳಗಾವಿ ರವರಿಗೆ ಹಾಲಿ ಇರುವ ಅಧಿಕಾರ ಮುಂದುವರೆಯುತ್ತದೆ. | |
| 2 | ಸಹಾಯಕ ನಿರ್ದೇಶಕರು (ಸಾಂಖ್ಯಿಕ) | 01 | ಬೆಳಗಾವಿ, ಕಾರವಾರ, ಧಾರವಾಡ | ಉಪ ನಿರ್ದೇಶಕರ ಕಛೇರಿ, ಪಶುಪಾಲನಾ ಮತ್ತು ಪಶುವೈದ್ಯಕೀಯ ಸೇವಾ ಇಲಾಖೆ, ಧಾರವಾಡ. |
| | | 01 | ಬಿಜಾಪುರ, ಬಾಗಲಕೋಟೆ, ಗದಗ್, ಹಾವೇರಿ. | ಉಪ ನಿರ್ದೇಶಕರ ಕಛೇರಿ, ಪಶುಪಾಲನಾ ಮತ್ತು ಪಶು ವೈದ್ಯಕೀಯ ಸೇವಾ ಇಲಾಖೆ, ಗದಗ್. |
| 3 | ಸಹಾಯಕ ಸಾಂಖ್ಯಿಕ ಅಧಿಕಾರಿ | 01 | ಬೆಳಗಾವಿ | ಪಶುವೈದ್ಯಾಧಿಕಾರಿಗಳ ಕಛೇರಿ, ಮಾದರಿ ಸಮೀಕ್ಷೆ ಯೋಜನೆ, ಪಶುಪಾಲನಾ ಮತ್ತು ಪಶುವೈದ್ಯಕೀಯ ಸೇವಾ ಇಲಾಖೆ, ಬೆಳಗಾವಿ. |
| | | 01 | ಕಾರವಾರ, ಧಾರವಾಡ | ಉಪ ನಿರ್ದೇಶಕರ ಕಛೇರಿ, ಪಶುಪಾಲನಾ ಮತ್ತು ಪಶು ವೈದ್ಯಕೀಯ ಸೇವಾ ಇಲಾಖೆ, ಕಾರವಾರ. |
| | | 01 | ಬಿಜಾಪುರ, ಬಾಗಲಕೋಟೆ | ಉಪ ನಿರ್ದೇಶಕರ ಕಛೇರಿ, ಪಶುಪಾಲನಾ ಮತ್ತು ಪಶು ವೈದ್ಯಕೀಯ ಸೇವಾ ಇಲಾಖೆ, ಬಿಜಾಪುರ. |
| | | 01 | ಗದಗ್, ಹಾವೇರಿ | ಉಪ ನಿರ್ದೇಶಕರ ಕಛೇರಿ, ಪಶುಪಾಲನಾ ಮತ್ತು ಪಶು ವೈದ್ಯಕೀಯ ಸೇವಾ ಇಲಾಖೆ, ಹಾವೇರಿ. |
| 4 | ಪಶುವೈದ್ಯಕೀಯ ಪರೀಕ್ಷಕರು | 01 | ಬೆಳಗಾವಿ | ಪಶುವೈದ್ಯಾಧಿಕಾರಿಗಳ ಕಛೇರಿ, ಮಾದರಿ ಸಮೀಕ್ಷೆ ಯೋಜನೆ, ಪಶುಪಾಲನಾ ಮತ್ತು ಪಶು ವೈದ್ಯಕೀಯ ಸೇವಾ ಇಲಾಖೆ, ಬೆಳಗಾವಿ. |

| | | | | |
|---|---|---|---|---|
| | | 01 | ಬೆಳಗಾವಿ | ಉಪ ನಿರ್ದೇಶಕರ ಕಛೇರಿ, ಪಶುಪಾಲನಾ ಮತ್ತು ಪಶು ವೈದ್ಯಕೀಯ ಸೇವಾ ಇಲಾಖೆ, ಬೆಳಗಾವಿ. |
| | | 01 | ಕಾರವಾರ | ಉಪ ನಿರ್ದೇಶಕರ ಕಛೇರಿ, ಪಶುಪಾಲನಾ ಮತ್ತು ಪಶು ವೈದ್ಯಕೀಯ ಸೇವಾ ಇಲಾಖೆ, ಕಾರವಾರ. |
| | | 01 | ಧಾರವಾಡ | ಉಪ ನಿರ್ದೇಶಕರ ಕಛೇರಿ, ಪಶುಪಾಲನಾ ಮತ್ತು ಪಶು ವೈದ್ಯಕೀಯ ಸೇವಾ ಇಲಾಖೆ, ಧಾರವಾಡ. |
| | | 01 | ಬಿಜಾಪುರ | ಉಪ ನಿರ್ದೇಶಕರ ಕಛೇರಿ, ಪಶುಪಾಲನಾ ಮತ್ತು ಪಶು ವೈದ್ಯಕೀಯ ಸೇವಾ ಇಲಾಖೆ, ಬಿಜಾಪುರ. |
| | | 01 | ಬಾಗಲಕೋಟೆ | ಉಪ ನಿರ್ದೇಶಕರ ಕಛೇರಿ, ಪಶುಪಾಲನಾ ಮತ್ತು ಪಶು ವೈದ್ಯಕೀಯ ಸೇವಾ ಇಲಾಖೆ, ಬಾಗಲಕೋಟೆ. |
| | | 01 | ಗದಗ್ | ಉಪ ನಿರ್ದೇಶಕರ ಕಛೇರಿ, ಪಶುಪಾಲನಾ ಮತ್ತು ಪಶು ವೈದ್ಯಕೀಯ ಸೇವಾ ಇಲಾಖೆ, ಗದಗ್. |
| | | 01 | ಹಾವೇರಿ | ಉಪ ನಿರ್ದೇಶಕರ ಕಛೇರಿ, ಪಶುಪಾಲನಾ ಮತ್ತು ಪಶು ವೈದ್ಯಕೀಯ ಸೇವಾ ಇಲಾಖೆ, ಹಾವೇರಿ. |

**ಬಿ.ಕೆ. ಶ್ರೀನಿವಾಸಮೂರ್ತಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ

## ABSTRACT

| | | | |
|---|---|---|---|
| | **ಜಂಟಿ ನಿರ್ದೇಶಕರು (ಅಂಕಿ ಅಂಶ), ಪಶುಪಾಲನಾ ಮತ್ತು ಪಶುವೈದ್ಯಕೀಯ ಸೇವಾ ಇಲಾಖೆ, ಬೆಂಗಳೂರು ರವರ ಕಛೇರಿ:** | | |
| | | | ಒಟ್ಟು ಹುದ್ದೆಗಳ ಸಂಖ್ಯೆ |
| 1 | ಜಂಟಿ ನಿರ್ದೇಶಕರು (ಅಂಕಿ ಅಂಶ)<br>22125–30300 | | 01 |
| 2 | ಉಪ ನಿರ್ದೇಶಕರು (ಅಂಕಿ ಅಂಶ)<br>18150–26925 | | 02 |
| 3 | ಸಾಂಖ್ಯಿಕ ನಿರೀಕ್ಷಕರು<br>7275–13350 | | 02 |
| 4 | ಪಶುವೈದ್ಯಕೀಯ ಪರೀಕ್ಷಕರು<br>6250–13350 | | 02 |
| | **(ಅ) ಒಟ್ಟು** | | **07** |

| | | ಹುದ್ದೆಗಳು | | | | |
|---|---|---|---|---|---|---|
| ವಿಭಾಗ ಮಟ್ಟದ ಕಛೇರಿಗಳು: | | ಬೆಂಗಳೂರು ವಿಭಾಗ | ಮೈಸೂರು ವಿಭಾಗ | ಗುಲ್ಬರ್ಗಾ ವಿಭಾಗ | ಬೆಳಗಾವಿ ವಿಭಾಗ | ಒಟ್ಟು ಹುದ್ದೆಗಳ ಸಂಖ್ಯೆ |
| 1 | ಸಹಾಯಕ ನಿರ್ದೇಶಕರು (ಸಾಂಖ್ಯಿಕ) 11400–21600 | 02 | 02 | 02 | 02 | 08 |
| 2 | ಸಹಾಯಕ ಸಾಂಖ್ಯಿಕ ಅಧಿಕಾರಿ 10000–18150 | 04 | 04 | 03 | 04 | 15 |
| 3 | ಪಶುವೈದ್ಯಕೀಯ ಪರೀಕ್ಷಕರು 6250–13350 | 10 | 09 | 07 | 08 | 34 |
| | (ಆ) ಒಟ್ಟು | **16** | **15** | **12** | **14** | **57** |
| | (ಅ) + (ಆ) ಒಟ್ಟು (07 + 57) | | | | | **64** |

**ಬಿ.ಕೆ. ಶ್ರೀನಿವಾಸಮೂರ್ತಿ**
ಪಿ.ಆರ್. 486
ಸರ್ಕಾರದ ಅಧೀನ ಕಾರ್ಯದರ್ಶಿ
ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ

## ನಗರಾಭಿವೃದ್ಧಿ ಸಚಿವಾಲಯ

## ಸುತ್ತೋಲೆ

**ಸಂಖ್ಯೆ: ನಅಇ 32 ಬೆಂಅಸೇ 2011 ಬೆಂಗಳೂರು, ದಿನಾಂಕ: 08–02–2011**

**ವಿಷಯ :** ರಸ್ತೆ ಅಗಲೀಕರಣ ಯೋಜನೆಯನ್ನು ಕೈಗೊಳ್ಳುವಾಗ ಸೂಕ್ತ ಕಾಯ್ದೆ/ನಿಯಮಾವಳಿಗಳನ್ನು ಅನುಸರಿಸುವ ಬಗ್ಗೆ

ಬೆಂಗಳೂರು ಮಹಾನಗರ ಪ್ರದೇಶದಲ್ಲಿ ಅಭಿವೃದ್ಧಿ ಪ್ರಾಧಿಕಾರ/ಸ್ಥಳೀಯ ಸಂಸ್ಥೆಗಳು ರಸ್ತೆ ಅಗಲೀಕರಣ ಕಾರ್ಯವನ್ನು ಕೈಗೊಳ್ಳುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿರುತ್ತದೆ. ನಗರದ ತ್ವರಿತ ಬೆಳವಣಿಗೆಯ ಹಿನ್ನೆಲೆಯಲ್ಲಿ ಇಂತಹ ಅಭಿವೃದ್ಧಿ ಕಾರ್ಯಗಳು ಅಗತ್ಯವಾದರೂ, ಅಗಲೀಕರಣಕ್ಕಾಗಿ ರಸ್ತೆಗಳನ್ನು ಆಯ್ದುಕೊಳ್ಳುವಾಗ ರಸ್ತೆ ಪರಿಚಲನೆಯ ಸೂಕ್ತ ಅಧ್ಯಯನ ಅಗತ್ಯವಾಗಿರುತ್ತದೆ ಹಾಗೂ ಅನುಷ್ಠಾನಗೊಳಿಸುವಾಗ ಕಾಯ್ದೆ/ನಿಯಮಾವಳಿಗಳಲ್ಲಿ ಸೂಚಿಸಲಾಗಿರುವ ಅಗತ್ಯ ಕಾರ್ಯವಿಧಾನವನ್ನು ಅನುಸರಿಸುವುದು ಅವಶ್ಯಕವಾಗಿರುತ್ತದೆ. ಇಲ್ಲದಿದ್ದಲ್ಲಿ ಸಾರ್ವಜನಿಕರಿಗೆ ಅನಗತ್ಯ ತೊಂದರೆಯಾಗುವುದಲ್ಲದೇ ಕಾಯ್ದೆಯ ಉಲ್ಲಂಘನೆಯಾಗುವ ಸಾಧ್ಯತೆ ಇರುತ್ತದೆ.

ಆದ್ದರಿಂದ, ಇನ್ನು ಮುಂದೆ ಬೆಂಗಳೂರು ಮಹಾನಗರ ವ್ಯಾಪ್ತಿಯಲ್ಲಿ ರಸ್ತೆ ಅಗಲೀಕರಣ ಯೋಜನೆಗಳನ್ನು ಕೈಗೊಳ್ಳುವಾಗ ಸದರಿ ರಸ್ತೆಗಳನ್ನು ಅಗಲೀಕರಣಕ್ಕಾಗಿ ಸರ್ಕಾರದಿಂದ ಅನುಮೋದಿತ ಮಹಾಯೋಜನೆಗಳಲ್ಲಿ (ಮಾಸ್ಟರ್ ಪ್ಲಾನ್) ಅಗಲೀಕರಣಕ್ಕಾಗಿ ಪ್ರಸ್ತಾಪಿಸಲಾಗಿದೆಯೇ, ಇಲ್ಲದಿದ್ದಲ್ಲಿ ಸದರಿ ರಸ್ತೆಗಳನ್ನು ಅಗಲೀಕರಣಕ್ಕಾಗಿ ಕೈಗೊಳ್ಳಲು ಕಾರಣಗಳು ಮುಂತಾದವುಗಳ ಬಗ್ಗೆ ಸಾರ್ವಜನಿಕರ ಗಮನಕ್ಕೆ ತಂದು, ಭೂ ಸ್ವಾಧೀನ ಕೈಗೊಳ್ಳುವಾಗ ಭೂ ಸ್ವಾಧೀನ ಕಾಯ್ದೆ/ಕೆಟಿಸಿಪಿ ಕಾಯ್ದೆ ಕಲಂ 14 (ಬಿ) ಅಡಿಯಲ್ಲಿ ಸೂಚಿಸಲಾಗಿರುವ ಅಗತ್ಯ ಕಾರ್ಯವಿಧಾನಗಳನ್ನು ಕಟ್ಟುನಿಟ್ಟಾಗಿ ಅನುಸರಿಸುವಂತೆ ಈ ಮೂಲಕ ಸೂಚಿಸಲಾಗಿದೆ.

**ಎಂ.ಎಸ್. ಪ್ರೇಮಚಂದ್ರ**
ಪಿ.ಆರ್. 487
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ

## ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ

**ವಿಷಯ :** ಶ್ರೀ ಎಸ್. ರಾಜೇಂದ್ರಪ್ಪ, ಸಂಪಾದಕರು ಮತ್ತು ಶ್ರೀ ಎಸ್.ವೈ. ಬೆಟ್ಟೇಗೌಡ, ಸಂಪಾದಕರು ಇವರುಗಳ ಸೇವೆಯನ್ನು ಕರ್ನಾಟಕ ಗ್ಯಾಸೆಟಿಯರ್ ಇಲಾಖೆಯಲ್ಲಿ ವಿಲೀನಗೊಳಿಸುವ ಬಗ್ಗೆ.

**ಓದಲಾಗಿದೆ :**
1. ಮುಖ್ಯ ಸಂಪಾದಕರು, ಕರ್ನಾಟಕ ಗ್ಯಾಸೆಟಿಯರ್ ಇಲಾಖೆ, ಬೆಂಗಳೂರು ಅವರ ಪತ್ರ ಸಂ:ಕಗ್ಯಾಇ/ಸಿ(1)ಸಂ/ವಿಲೀನ/2005–06, ದಿ : 13–07–2005.
2. ಸರ್ಕಾರಿ ಆದೇಶ ಸಂಖ್ಯೆ : ಇಡಿ/128/ಡಿಜಿಎಂ/2007, ದಿ : 29–03–2008.
3. ಮುಖ್ಯಸಂಪಾದಕರು, ಕರ್ನಾಟಕ ಗ್ಯಾಸೆಟಿಯರ್ ಇಲಾಖೆ ಬೆಂಗಳೂರು ಅವರ ಪತ್ರ ಸಂ : ಕಗ್ಯಾಇ/ಸಿ(1)ಸಂ/ವಿಲೀನ/2008, ದಿ : 09–04–2008.

**ಪ್ರಸ್ತಾವನೆ:**

ಪದವಿ ಪೂರ್ವ ಶಿಕ್ಷಣ ಇಲಾಖೆಯಲ್ಲಿ ಉಪನ್ಯಾಸಕ ವೃಂದಕ್ಕೆ ಸೇರಿದ ಶ್ರೀ ಎಸ್. ರಾಜೇಂದ್ರಪ್ಪ, ಹಾಗೂ ಶ್ರೀ ಎಸ್.ವೈ. ಬೆಟ್ಟೇಗೌಡ, ಇವರುಗಳು ಕರ್ನಾಟಕ ಗ್ಯಾಸೆಟಿಯರ್ ಇಲಾಖೆಯಲ್ಲಿ ಪ್ರತಿನಿಯೋಜನೆ ಮೇರೆಗೆ ಸಂಪಾದಕರ ಹುದ್ದೆಯಲ್ಲಿ ಸೇವೆ ಸಲ್ಲಿಸುತ್ತಿದ್ದು, ಇದೇ ಇಲಾಖೆಯಲ್ಲಿ ಸಾರ್ವಜನಿಕ ಹಿತದೃಷ್ಟಿ ಆಧಾರದ ಮೇಲೆ ವಿಲೀನ ಹೊಂದಲು ಇಚ್ಛಿಸಿ ಮನವಿ ಸಲ್ಲಿಸಿರುತ್ತಾರೆಂದು, ಗ್ಯಾಸೆಟಿಯರ್ ಇಲಾಖೆಯಲ್ಲಿ ಕೆಲಸ ಮಾಡಲು ವಿಶೇಷ ಆಸಕ್ತಿ ಹೊಂದಿದ ನುರಿತ ಸಂಪಾದಕ ವರ್ಗದ ಅವಶ್ಯಕತೆ ಇದ್ದು ಈಗಾಗಲೇ ಮೂರು ಸಂಪಾದಕರ ಹುದ್ದೆ ಖಾಲಿ ಇರುವುದರಿಂದ ಹಾಗೂ

ಗ್ಯಾಸೆಟಿಯರ್‌ಗಳ ಅಧ್ಯಾಯಗಳನ್ನು ರಚಿಸಲು ಅನುಭವಿ ಸಂಪಾದಕರ ಕೊರತೆ ಇರುವುದರಿಂದ ಈ ಇಲಾಖೆಯಲ್ಲಿ, ಪ್ರತಿ ನಿಯೋಜನೆ ಮೇಲೆ ಸುಮಾರು 8-10 ವರ್ಷಗಳಿಂದ ಕೆಲಸ ಮಾಡುತ್ತಿರುವ ಶ್ರೀ ಎಸ್.ರಾಜೇಂದ್ರಪ್ಪ ಹಾಗೂ ಶ್ರೀ ಎಸ್.ವೈ. ಬೆಟ್ಟೇಗೌಡ, ಇವರುಗಳ ಸೇವೆಯನ್ನು ಗ್ಯಾಸೆಟಿಯರ್ ಇಲಾಖೆಯಲ್ಲಿ ಸಾರ್ವಜನಿಕ ಹಿತದೃಷ್ಟಿಯಿಂದ ವಿಲೀನಗೊಳಿಸಿ ಆದೇಶ ಹೊರಡಿಸಬೇಕೆಂದು ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ಮುಖ್ಯ ಸಂಪಾದಕರು, ಕರ್ನಾಟಕ ಗ್ಯಾಸೆಟಿಯರ್ ಇಲಾಖೆ ಇವರು ಕೋರಿರುತ್ತಾರೆ.

ಶ್ರೀ ಎಸ್.ರಾಜೇಂದ್ರಪ್ಪ ಮತ್ತು ಶ್ರೀ ಎಸ್.ವೈ. ಬೆಟ್ಟೇಗೌಡ ಇವರುಗಳು ಕ್ರಮವಾಗಿ 1994 ಮತ್ತು 1998 ರಿಂದಲೂ ನಿಯೋಜನೆ ಮೇಲೆ ಕನ್ನಡ, ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆಯ ಕ್ಷೇತ್ರೀಯ ಇಲಾಖೆಯಾದ ಕರ್ನಾಟಕ ಗ್ಯಾಸೆಟಿಯರ್ ಇಲಾಖೆಯಲ್ಲಿ ಸಂಪಾದಕರಾಗಿ ಕಾರ್ಯ ನಿರ್ವಹಿಸುತ್ತಿದ್ದು, ಇವರುಗಳ ಸೇವೆಯನ್ನು ಗ್ಯಾಸೆಟಿಯರ್ ಇಲಾಖೆಯಲ್ಲಿ ವಿಲೀನಗೊಳಿಸಲು ಕರ್ನಾಟಕ ನಾಗರೀಕ ಸೇವೆಗಳು (ಸಾಮಾನ್ಯ ನೇಮಕಾತಿ) ನಿಯಮಗಳು 1977ರ ನಿಯಮ-16ರ ಪ್ರಕಾರ ಕನ್ನಡ, ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆಯ ವಶಕ್ಕೆ ಖಾಯಂ ಆಗಿ ಬಿಟ್ಟುಕೊಡಲು ಮೇಲೆ (2)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಆದೇಶಿಸಲಾಗಿದೆ.

ಶ್ರೀ ಎಸ್.ರಾಜೇಂದ್ರಪ್ಪರವರು ದಿನಾಂಕ : 01-01-1994 ರಿಂದ ಹಾಗೂ ಶ್ರೀ ಎಸ್.ವೈ. ಬೆಟ್ಟೇಗೌಡರವರು ದಿನಾಂಕ : 03-11-1998 ರಿಂದ ಕರ್ನಾಟಕ ಗ್ಯಾಸೆಟಿಯರ್ ಇಲಾಖೆಯಲ್ಲಿ ಸಂಪಾದಕರಾಗಿ ಕಾರ್ಯನಿರ್ವಹಿಸುತ್ತಿದ್ದಾರೆ. ಇಲಾಖೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ಕೆಲವೇ ಸಂಪಾದಕರುಗಳ ಪೈಕಿ ಇವರುಗಳೂ ಇರುವುದರಿಂದ ಇವರ ಸೇವೆಯನ್ನು ಗ್ಯಾಸೆಟಿಯರ್ ಇಲಾಖೆಯಲ್ಲಿ ವಿಲೀನಗೊಳಿಸಲು ಅವಶ್ಯಕವಾಗಿರುತ್ತದೆಂದು ಸದರಿ ಅಧಿಕಾರಿಗಳ ಸೇವೆಯನ್ನು ಗ್ಯಾಸೆಟಿಯರ್ ಇಲಾಖೆಯಲ್ಲಿ ವಿಲೀನಗೊಳಿಸಲು ಶಿಕ್ಷಣ ಇಲಾಖೆಯ ಸಮ್ಮತಿ ನೀಡಿರುವುದರಿಂದ, ಈ ಅಧಿಕಾರಿಗಳ ವಿಲೀನದ ಬಗ್ಗೆ ಮುಂದಿನ ಕ್ರಮವನ್ನು ಕೈಗೊಂಡು ಸೂಕ್ತ ಆದೇಶವನ್ನು ನೀಡುವಂತೆ ಮೇಲೆ (3)ರಲ್ಲಿ ಓದಲಾದ ಪತ್ರದಲ್ಲಿ ಮುಖ್ಯಸಂಪಾದಕರು, ಕರ್ನಾಟಕ ಗ್ಯಾಸೆಟಿಯರ್ ಇಲಾಖೆ ಇವರು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದೆ, ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಕಸಂವಾಪ್ರ 8 ಕರಾಗೆ 2008 ಬೆಂಗಳೂರು, ದಿನಾಂಕ: 17-02-2011**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ಗ್ಯಾಸೆಟಿಯರ್ ಇಲಾಖೆಯಲ್ಲಿ ಸಂಪಾದಕರ ಹುದ್ದೆಯಲ್ಲಿ ನಿಯೋಜನೆ ಮೇಲೆ ಕಾರ್ಯನಿರ್ವಹಿಸುತ್ತಿರುವ ಶ್ರೀ ಎಸ್. ರಾಜೇಂದ್ರಪ್ಪ ಮತ್ತು ಶ್ರೀ ಎಸ್.ವೈ. ಬೆಟ್ಟೇಗೌಡ ಇವರುಗಳನ್ನು ಕರ್ನಾಟಕ ನಾಗರಿಕ ಸೇವೆಗಳು (ಸಾಮಾನ್ಯ ನೇಮಕಾತಿ) ನಿಯಮಗಳು 1977ರ ನಿಯಮ-16 (ಎ)(ii)ರ ಪ್ರಕಾರ ಹಾಗೂ ಕರ್ನಾಟಕ ಸರ್ಕಾರಿ ನೌಕರರ (ಜೇಷ್ಠತಾ ನಿಯಮ) 1957ರ ನಿಯಮ 6ರ ಮೊದಲನೇ ಪರಂತುಕದ ಪ್ರಕಾರ ಕರ್ನಾಟಕ ಗ್ಯಾಸೆಟಿಯರ್ ಇಲಾಖೆಯಲ್ಲಿನ ಸಂಪಾದಕರ ಹುದ್ದೆಯಲ್ಲಿ, ಸರ್ಕಾರದ ಆದೇಶ ಸಂಖ್ಯೆ ಇಡಿ 128 ಡಿಜಿಎಂ 2007 ದಿನಾಂಕ : 29-03-2008ರನ್ವಯ ದಿನಾಂಕ : 29-03-2008 ರಿಂದ ಜಾರಿಗೆ ಬರುವಂತೆ ವಿಲೀನಗೊಳಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ.ಕೆ. ಧರ್ಮರಾಜಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ
ಕನ್ನಡ ಮತ್ತು ಸಂಸ್ಕೃತಿ,
ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ)(ಪ್ರ)

ಪಿ.ಆರ್. 516

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಚಿಕ್ಕಬಳ್ಳಾಪುರ ಜಿಲ್ಲೆ, ಗುಡಿಬಂಡೆ ತಾಲ್ಲೂಕು ಹಂಪಸಂದ್ರ ಹೊಸಕೆರೆ ನಿರ್ಮಾಣಕ್ಕೆ ಸ್ವಾಧೀನಪಡಿಸಿಕೊಂಡ ಹಂಪಸಂದ್ರ ಮತ್ತು ಬೆಣ್ಣೆಪರ್ತಿ ಗ್ರಾಮಗಳ ಜಮೀನುಗಳಿಗೆ ಒಪ್ಪಂದದ ಐತೀರ್ಪಿನಂತೆ ತೇವಣಿ ಮಾಡಲು ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :**

1. ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ಇವರ ಪತ್ರ ಸಂಖ್ಯೆ : ಮುಸದ/ಲೆಶಾಖೆ/ಲೆಸ-1/3/ಭೂಸ್ವಾಧೀನ/09-10/2424, ದಿನಾಂಕ : 16-09-2009.
2. ಕಂದಾಯ ಇಲಾಖೆಯ ಪತ್ರ ಸಂಖ್ಯೆ : ಕಂಇ 07 ಭೂಸ್ವಾಕೋ 2010, ದಿನಾಂಕ : 09-12-2010.

**ಪ್ರಸ್ತಾವನೆ:**

ಚಿಕ್ಕಬಳ್ಳಾಪುರ ಜಿಲ್ಲೆ, ಗುಡಿಬಂಡೆ ತಾಲ್ಲೂಕು ಹಂಪಸಂದ್ರ ಹೊಸಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ಹಂಪಸಂದ್ರ ಮತ್ತು ಬೆಣ್ಣೆಪರ್ತಿ ಗ್ರಾಮಗಳ ಜಮೀನುಗಳ ಮಾಲೀಕರಿಗೆ ಒಪ್ಪಂದದ ಅವಾರ್ಡ್‌ನಂತೆ ತೇವಣಿ ಮಾಡಲು ರೂ. 179.95 ಲಕ್ಷಗಳನ್ನು ಬಿಡುಗಡೆ ಮಾಡುವಂತೆ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ದಕ್ಷಿಣ) ವಲಯ, ಬೆಂಗಳೂರು ಇವರು ಮೇಲೆ ಕ್ರಮಾಂಕ (1)ರಲ್ಲಿ ಓದಲಾದ ದಿನಾಂಕ : 16-09-2009ರ ಪತ್ರದಲ್ಲಿ ಕೋರಿರುತ್ತಾರೆ.

ಚಿಕ್ಕಬಳ್ಳಾಪುರ ಜಿಲ್ಲೆ, ಗುಡಿಬಂಡೆ ತಾಲ್ಲೂಕು ಹಂಪಸಂದ್ರ ಮತ್ತು ಬೆಣ್ಣೆಪರ್ತಿ ಗ್ರಾಮದ ವಿವಿಧ ಸರ್ವೆ ನಂಬರ್‌ಗಳಲ್ಲಿ ಒಟ್ಟು 38-16 ಎಕರೆ ಜಮೀನನ್ನು ಹಂಪಸಂದ್ರ ಹೊಸಕೆರೆ ನಿರ್ಮಾಣಕ್ಕಾಗಿ ಭೂಸ್ವಾಧೀನಪಡಿಸಿಕೊಳ್ಳಲು ಭೂಸ್ವಾಧೀನ ಕಾಯ್ದೆ ಕಲಂ 4(1)ರ ಅಧಿಸೂಚನೆ ದಿನಾಂಕ : 10-05-2007ರಂದು ಹೊರಡಿಸಿದೆ. ಈ ಪ್ರಕರಣದಲ್ಲಿ ಜಿಲ್ಲಾಧಿಕಾರಿ, ಚಿಕ್ಕಬಳ್ಳಾಪುರ ಇವರ ಕೋರಿಕೆಯಂತೆ ಸದರಿ ಗ್ರಾಮಗಳ ಖುಷ್ಕಿ ಜಮೀನಿಗೆ ರೂ. 4.00 ಲಕ್ಷ ಹಾಗೂ ಬಾಗಾಯ್ತು ಜಮೀನುಗಳಿಗೆ ರೂ. 5.00 ಲಕ್ಷಗಳನ್ನು ನಿಗದಿಪಡಿಸಿ ಒಪ್ಪಂದದ ಅವಾರ್ಡ್ ರಚಿಸಲು ಕಂದಾಯ ಇಲಾಖೆಯು ಮೇಲೆ ಕ್ರಮಾಂಕ (2)ರಲ್ಲಿ ಓದಲಾದ ದಿನಾಂಕ : 09-12-2010ರ ಪತ್ರದಲ್ಲಿ ಅನುಮೋದನೆ ನೀಡಿದೆ. ಆದುದರಿಂದ ಸಹಾಯಕ ಆಯುಕ್ತರು ಮತ್ತು ಭೂಸ್ವಾಧೀನಾಧಿಕಾರಿ, ಚಿಕ್ಕಬಳ್ಳಾಪುರ ಉಪ ವಿಭಾಗ ಇವರು ದಿನಾಂಕ : 03-12-2010ರಂದು ಒಪ್ಪಂದದ ಅವಾರ್ಡ್ ರಚಿಸಿರುತ್ತಾರೆ.

ಮೇಲ್ಕಂಡ ಎಲ್ಲಾ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸನೀಇ 05 ಭೂಸ್ವಾಪ್ರ 2009, ಬೆಂಗಳೂರು, ದಿನಾಂಕ: 15–02–2011**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದ ಚಿಕ್ಕಬಳ್ಳಾಪುರ ಜಿಲ್ಲೆ, ಗುಡಿಬಂಡೆ ತಾಲ್ಲೂಕು ಹಂಪಸಂದ್ರ ಮತ್ತು ಬೆಣ್ಣೆಪರ್ತಿ ಗ್ರಾಮಗಳ ಜಮೀನುಗಳನ್ನು ಹಂಪಸಂದ್ರ ಹೊಸಕೆರೆ ನಿರ್ಮಾಣಕ್ಕೆ ಸ್ವಾಧೀನಪಡಿಸಿಕೊಂಡಿದ್ದು, ಒಪ್ಪಂದದ ಅವಾರ್ಡ್‌ನಂತೆ ಠೇವಣಿ ಮಾಡಲು ರೂ. 173.32 ಲಕ್ಷಗಳನ್ನು (ನೂರ ಎಪ್ಪತ್ತಮೂರು ಲಕ್ಷದ ಮೂವತ್ತೆರಡು ಸಾವಿರ ರೂಪಾಯಿಗಳು ಮಾತ್ರ) ಬಿಡುಗಡೆ ಮಾಡಲು ಅನುಮೋದನೆ ನೀಡಿದೆ.

ಈ ವೆಚ್ಚವನ್ನು 2010–11ನೇ ಸಾಲಿನ ಆಯವ್ಯಯದ ಲೆಕ್ಕ ಶೀರ್ಷಿಕೆ "4702–0–1–101–02–139 ಹೊಸಕೆರೆಗಳ ನಿರ್ಮಾಣ ಪ್ರಧಾನ ಕಾಮಗಾರಿಗಳು" ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಭೂಸ್ವಾಧೀನಕ್ಕೆ ಒಳಪಟ್ಟಿರುವ ಜಮೀನನ್ನು ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಸಣ್ಣ ನೀರಾವರಿ ಉಪ ವಿಭಾಗ, ಚಿಕ್ಕಬಳ್ಳಾಪುರ ಇವರು ಇಲಾಖೆಯ ವಶಕ್ಕೆ ಪಡೆದುಕೊಂಡು, ಕಂದಾಯ ದಾಖಲೆಗಳಲ್ಲಿ ಇಂಡೀಕರಿಸುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 01 ಟಿಎಫ್‌ಪಿ 2010, ದಿನಾಂಕ : 20–10–2010 ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಗೋಪಾಲ್**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 517

ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಕೃಷಿ ಸಚಿವಾಲಯ

**ವಿಷಯ :** 2010–11ನೇ ಸಾಲಿನ ಹೊಸ ಯೋಜನೆಗಳಿಗೆ ಮಂಜೂರಾತಿ ನೀಡುವ ಬಗ್ಗೆ.

**ಓದಲಾಗಿದೆ :**

1. ಕುಲಪತಿಯವರು, ಕೃಷಿ ವಿಶ್ವವಿದ್ಯಾಲಯ, ರಾಯಚೂರುರವರ ದಿನಾಂಕ : 30–04–2010, 18–06–2010, 20–08–2010 ಮತ್ತು 01–01–2011ರ ಪತ್ರಗಳ ಸಂಖ್ಯೆ : VC/UASR/2010-11.
2. ದಿನಾಂಕ : 04–05–2010, 20–07–2010, 20–11–2010 ಮತ್ತು 19–01–2011ಗಳ ಸರ್ಕಾರಿ ಆದೇಶ ಸಂಖ್ಯೆ : ಕೃತೋಇ 111 ಕೃವಿವಿ 2010.

**ಪ್ರಸ್ತಾವನೆ:**

2010–11ನೇ ಸಾಲಿನ ಆಯವ್ಯಯದ ಲೆಕ್ಕ ಶೀರ್ಷಿಕೆ 2415–80–277–3–01–ಸಹಾಯಾನುದಾನ (ಯೋಜನೆ) ಅಡಿಯಲ್ಲಿ 1295.00 ಲಕ್ಷ ರೂಪಾಯಿಗಳನ್ನು ತೆಗೆದಿರಿಸಿದೆ. ಕಾಲೇಜುಗಳ ಪ್ರಯೋಗಾಲಯಗಳು, ಗ್ರಂಥಾಲಯಗಳು ಮತ್ತು ಇತರ ಬೋಧಕ ಚಟುವಟಿಕೆಗಳ ಸುಧಾರಣೆ ಎಂಬ ಹೊಸ ಯೋಜನೆಗೆ ಮೀಸಲಾದ 1295.00 ಲಕ್ಷ ರೂಪಾಯಿಗಳಿಗೆ ಸಂಬಂಧಿಸಿದ ಈ ಹೊಸ ಯೋಜನೆಗೆ ಮಂಜೂರಾತಿ ನೀಡುವಂತೆ ಮತ್ತು ಅನುದಾನವನ್ನು ಬಿಡುಗಡೆ ಮಾಡಲು ಪರಿಶೀಲಿಸುವಂತೆ ಯೋಜನಾ ಸಚಿವಾಲಯವು (ಪಿಡಿ 5 ಎಎಂಎಂ 2010) ಕೋರಿದೆ.

ಮೇಲೆ (1)ರಲ್ಲಿ ಓದಲಾದ ಪತ್ರಗಳ ಮುಖಾಂತರ ಕಾಲೇಜುಗಳ ಪ್ರಯೋಗಾಲಯಗಳು, ಗ್ರಂಥಾಲಯಗಳು ಮತ್ತು ಇತರ ಬೋಧಕ ಚಟುವಟಿಕೆಗಳ ಸುಧಾರಣೆ ಎಂಬ ಹೊಸ ಯೋಜನೆಗೆ ಮೀಸಲಾದ 1295.00 ಲಕ್ಷ ರೂಪಾಯಿಗಳಿಗೆ ಸಂಬಂಧಿಸಿದ ದಾಖಲೆಗಳನ್ನು ಸಲ್ಲಿಸಿ, ಲೆಕ್ಕ ಶೀರ್ಷಿಕೆ 2415–80–277–3–01–ಸಹಾಯಾನುದಾನ (ಯೋಜನೆ) ಅಡಿಯಲ್ಲಿ 1295.00 ಲಕ್ಷ ರೂಪಾಯಿಗಳನ್ನು ಯೋಜನಾ ಅನುದಾನದಲ್ಲಿ ಬಿಡುಗಡೆ ಮಾಡುವಂತೆ ರಾಯಚೂರು ಕೃಷಿ ವಿಶ್ವವಿದ್ಯಾಲಯದ ಕುಲಪತಿಯವರು/ಕುಲಸಚಿವರು/ಹಣಕಾಸು ನಿಯಂತ್ರಣಾಧಿಕಾರಿಗಳು ಪ್ರಸ್ತಾಪಿಸಿದ್ದಾರೆ.

ಪ್ರಸ್ತಾವನೆಗೆ ಸಂಬಂಧಿಸಿದಂತೆ ಯೋಜನಾ ಸಚಿವಾಲಯವು ದಿನಾಂಕ : 16–11–2010ರ ಟಿಪ್ಪಣಿ ಸಂಖ್ಯೆ : ಪಿಡಿ 40 ಪಿಎಫ್‌ಒ 2010ರಲ್ಲಿ Planning Department concurs with the proposal of the administrative department ಎಂಬುದಾಗಿ ತನ್ನ ಅಭಿಪ್ರಾಯ/ಸಹಮತಿಯನ್ನು ನೀಡಿದೆ.

ಮೇಲ್ಕಂಡ ಪ್ರಸ್ತಾವನೆಗೆ ಆರ್ಥಿಕ ಇಲಾಖೆಯು ದಿನಾಂಕ : 30–11–2010ರ ಟಿಪ್ಪಣಿ ಸಂಖ್ಯೆ : ಆಇ 414 ವೆ4/2010ರ ಮುಖಾಂತರ "2010–11ನೇ ಸಾಲಿಗೆ ರಾಯಚೂರು ಕೃಷಿ ವಿಶ್ವವಿದ್ಯಾಲಯದ ಹೊಸ ಯೋಜನೆಯಾದ ಕಾಲೇಜುಗಳ ಪ್ರಯೋಗಾಲಯಗಳು, ಗ್ರಂಥಾಲಯಗಳು ಮತ್ತು ಇತರ ಬೋಧಕ ಚಟುವಟಿಕೆಗಳ ಸುಧಾರಣೆ ಯೋಜನೆಗೆ ಆರ್ಥಿಕ ಇಲಾಖೆಯು ಸಹಮತಿಸಿದೆ. ಅನುದಾನ ಬಿಡುಗಡೆಗೆ ಪ್ರಸ್ತಾವನೆಯನ್ನು ಆರ್ಥಿಕ ಇಲಾಖೆಗೆ ಕಳುಹಿಸುವಂತೆ ತಿಳಿಸಲಾಗಿದೆ" ಎಂಬುದಾಗಿ ತನ್ನ ಅಭಿಪ್ರಾಯವನ್ನು ನೀಡಿದೆ.

ಲೆಕ್ಕ ಶೀರ್ಷಿಕೆ 2415–80–277–3–01 (ಸಹಾಯಾನುದಾನ 101) ಅಡಿಯಲ್ಲಿ 1295.00 ಲಕ್ಷ ರೂಪಾಯಿಗಳನ್ನು 4 ಸಮನಾದ ಕಂತುಗಳ ಮುಖಾಂತರ ಮೇಲೆ (2)ರಲ್ಲಿ ಓದಲಾದ ಆದೇಶಗಳ ಮುಖಾಂತರ ಆರ್ಥಿಕ ಇಲಾಖೆಯ ಸಹಮತಿಯನ್ನು ಪಡೆದು ಈಗಾಗಲೇ ಬಿಡುಗಡೆ ಮಾಡಿರುತ್ತದೆ.

**ಸರ್ಕಾರದ ಆದೇಶ ಸಂಖ್ಯೆ : ಕೃಇ 156 ಕೃವಿವಿ 2010, ಬೆಂಗಳೂರು, ದಿನಾಂಕ: 09–02–2011.**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳ ಮೇರೆಗೆ 2010–11ನೇ ಸಾಲಿನ ಹೊಸ ಯೋಜನೆಯಾದ ಕಾಲೇಜುಗಳ ಪ್ರಯೋಗಾಲಯಗಳು, ಗ್ರಂಥಾಲಯಗಳು ಮತ್ತು ಇತರ ಬೋಧಕ ಚಟುವಟಿಕೆಗಳ ಸುಧಾರಣೆ ಎಂಬ ಹೊಸ ಯೋಜನೆಗೆ ಮೀಸಲಾದ 1295.00 ಲಕ್ಷ ರೂಪಾಯಿಗಳಿಗೆ ಸಂಬಂಧಿಸಿದ ರಾಯಚೂರು ಕೃಷಿ ವಿಶ್ವವಿದ್ಯಾಲಯದ ದಿನಾಂಕ : 30–04–2010ರ ಯೋಜನಾ ಪ್ರಸ್ತಾವನೆಗೆ ಸರ್ಕಾರದ ಆಡಳಿತಾತ್ಮಕ ಮಂಜೂರಾತಿಯನ್ನು ಈ ಮೂಲಕ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಿ.ಕೆ. ಗುರಾಣಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 518

ಕೃಷಿ ಇಲಾಖೆ (ಸೇವೆಗಳು)

## ಮೂಲಸೌಲಭ್ಯ ಅಭಿವೃದ್ಧಿ ಸಚಿವಾಲಯ

**ವಿಷಯ :** ಬಿಜಾಪುರ ನಗರದಲ್ಲಿ ಗ್ರೀನ್‌ಫೀಲ್ಡ್ ವಿಮಾನ ನಿಲ್ದಾಣವನ್ನು ನಿರ್ಮಾಣ ಮಾಡಲು ಭೂಸ್ವಾಧೀನಕ್ಕೆ ಅಗತ್ಯವಾದ ಹಣ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :**

1. ಸರ್ಕಾರಿ ಆದೇಶ ಸಂ. ಮೂಅಇ 88 ರಾಅವಿ 2003, ದಿನಾಂಕ : 15–02–2007.
2. ಸರ್ಕಾರಿ ಆದೇಶ ಸಂ. ಮೂಅಇ 88 ರಾಅವಿ 2003, ದಿನಾಂಕ : 23–03–2007.
3. ಸರ್ಕಾರಿ ಆದೇಶ ಸಂ. ಮೂಅಇ 88 ರಾಅವಿ 2003, ದಿನಾಂಕ : 03–11–2007.
4. ಸರ್ಕಾರಿ ಆದೇಶ ಸಂ. ಮೂಅಇ 88 ಮೂಇವಿ 2003, ದಿನಾಂಕ : 31–03–2009.
5. ಜಿಲ್ಲಾಧಿಕಾರಿಗಳು, ಬಿಜಾಪುರ ಜಿಲ್ಲೆ, ಇವರ ಪತ್ರ ಸಂ. ಕಂಇ/ಎಲ್.ಎನ್.ಡಿ/ಸಿ. ಆರ್. 127(2)/00–01 ದಿನಾಂಕ : 22–07–2009.
6. ಸರ್ಕಾರಿ ಆದೇಶ ಸಂ. ಮೂಅಇ 88 ರಾಅವಿ 2003, ದಿನಾಂಕ : 26–08–2009.
7. ಸರ್ಕಾರಿ ಆದೇಶ ಸಂ. ಆರ್‌ಡಿ 42 ಎಲ್‌ಬಿಜೆ 2007, ದಿನಾಂಕ : 25–09–2010.
8. ಜಿಲ್ಲಾಧಿಕಾರಿಗಳು, ಬಿಜಾಪುರ ಜಿಲ್ಲೆ, ಇವರ ಪತ್ರ ಸಂ. ಕಂಇ/ಎಲ್.ಎನ್.ಡಿ/ಸಿ.ಆರ್./304/2009–10 ದಿನಾಂಕ : 26–10–2010.
9. ಜಿಲ್ಲಾಧಿಕಾರಿಗಳು,ಬಿಜಾಪುರ ಜಿಲ್ಲೆ, ಇವರ ಪತ್ರ ಸಂ. ಕಂಇ/ಎಲ್.ಎನ್.ಡಿ/ಸಿ.ಆರ್./128(2)/2009–10 ದಿನಾಂಕ : 04–01–2011.
10. ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : FD 267 BRS 2010, ದಿನಾಂಕ : 29–01–2011.

**ಪ್ರಸ್ತಾವನೆ:**

ಮೇಲೆ ಕ್ರಮ ಸಂ(1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಬಿಜಾಪುರ ವಿಮಾನ ನಿಲ್ದಾಣದ ನಿರ್ಮಾಣಕ್ಕಾಗಿ ಅವಶ್ಯವಿರುವ ಭೂಸ್ವಾಧೀನಕ್ಕಾಗಿ ರೂ. 5.50 ಕೋಟಿಗಳನ್ನು ಕೆಲವು ಷರತ್ತುಗಳೊಂದಿಗೆ ಬಿಡುಗಡೆ ಮಾಡಲು ಮಂಜೂರಾತಿಯನ್ನು ನೀಡಲಾಗಿರುತ್ತದೆ.

2. ಮೇಲೆ ಕ್ರಮ ಸಂ. (2)ರ ಆದೇಶದಲ್ಲಿ ಬಿಜಾಪುರದಲ್ಲಿ ಗ್ರೀನ್‌ಫೀಲ್ಡ್ ವಿಮಾನ ನಿಲ್ದಾಣವನ್ನು ಸಾರ್ವಜನಿಕ ಖಾಸಗಿ ಸಹಭಾಗಿತ್ವದ ಆಧಾರದ ಮೇಲೆ ಸ್ಥಾಪಿಸಲು ಮಂಜೂರಾತಿಯನ್ನು ನೀಡಲಾಗಿದೆ.

3. ಮೇಲಿನ ಕ್ರಮ ಸಂ. (3)ರಲ್ಲಿ ಓದಲಾದ ಸರ್ಕಾರಿ ಆದೇಶ ದಿನಾಂಕ : 03–11–07ರಲ್ಲಿ ಇದೇ ಉದ್ದೇಶಕ್ಕೆ ರೂ. 4.00 ಕೋಟಿಗಳನ್ನು ಬಿಡುಗಡೆ ಮಾಡಲಾಗಿದೆ.

4. ಮೇಲೆ ಕ್ರಮ ಸಂ.(4)ರಲ್ಲಿ ಓದಲಾದ ದಿನಾಂಕ : 31–03–09ರ ಸರ್ಕಾರಿ ಆದೇಶದಲ್ಲಿ ಬಿಜಾಪುರ ವಿಮಾನ ನಿಲ್ದಾಣಕ್ಕೆ ಭೂಸ್ವಾಧೀನಪಡಿಸಿಕೊಳ್ಳಲು ಉದ್ದೇಶಿಸಿರುವ ಜಮೀನಿನ ಭೂಮಾಲೀಕರಿಗೆ ಪರಿಹಾರ ಧನವನ್ನು ಪಾವತಿಸಲು ರೂ. 15.00 ಕೋಟಿಗಳನ್ನು ಬಿಡುಗಡೆ ಮಾಡಲಾಗಿದೆ.

5. ಮೇಲೆ ಕ್ರಮ ಸಂ.(5)ರಲ್ಲಿ ಓದಲಾದ ಪತ್ರದಲ್ಲಿ, ಜಿಲ್ಲಾಧಿಕಾರಿಗಳು, ಬಿಜಾಪುರ, ಇವರು ಬಿಜಾಪುರ ವಿಮಾನ ನಿಲ್ದಾಣದ ಭೂಸ್ವಾಧೀನಕ್ಕಾಗಿ ಒಟ್ಟು ರೂ. 30,64,37,500/– ಅನುದಾನ ಅವಶ್ಯಕತೆ ಇದ್ದು, ಈ ಪೈಕಿ ಈಗಾಗಲೇ ರೂ. 24,50,00,000/– ಅನುದಾನವನ್ನು ಬಿಡುಗಡೆ ಮಾಡಲಾಗಿದೆ ಎಂದು ಉಳಿದ ರೂ. 6,14,37,500/– ಅನುದಾನವನ್ನು ಬಿಡುಗಡೆ ಮಾಡುವಂತೆ ಕೋರಿ ಪ್ರಸ್ತಾವನೆಯನ್ನು ಕಳುಹಿಸಿರುತ್ತಾರೆ.

6. ಈ ಪ್ರಸ್ತಾವನೆಯನ್ನು ಸರ್ಕಾರ ಪರಿಶೀಲಿಸಿ ಉಲ್ಲೇಖ (6)ರ ಆದೇಶದಲ್ಲಿ ಬಿಜಾಪುರ ವಿಮಾನ ನಿಲ್ದಾಣಕ್ಕಾಗಿ ಭೂಸ್ವಾಧೀನಪಡಿಸಿಕೊಳ್ಳಲು ಅವಶ್ಯವಿರುವ ರೂ. 5.00 ಕೋಟಿಗಳನ್ನು ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.

7. ಮೇಲೆ ಕ್ರಮ ಸಂ. (7)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ, ಬಿಜಾಪುರ, ವಿಮಾನ ನಿಲ್ದಾಣದ ಸ್ಥಾಪನೆಗಾಗಿ ಹಾಗೂ ಇತರೆ ಚಟುವಟಿಕೆಗಾಗಿ ಬಿಜಾಪುರ ತಾಲ್ಲೂಕಿನ ಬುರಣಾಪುರ, ಅಲಿಯಾಬಾದ್ ಮತ್ತು ಮದಬಾದಿ ಗ್ರಾಮಗಳಲ್ಲಿನ ಒಟ್ಟಾರೆ 347.33 ಎಕರೆ ಸರ್ಕಾರಿ ಹುಲ್ಲುಗಾವಲು ಜಮೀನನ್ನು ಬಿಜಾಪುರ ವಿಮಾನ ನಿಲ್ದಾಣ ಸ್ಥಾಪನೆಗಾಗಿ ಕೆಐಎಡಿಬಿಗೆ ಹಸ್ತಾಂತರಿಸಲು ದಿನಾಂಕ : 25–09–2010ರ ಆದೇಶ ಸಂಖ್ಯೆ : ಆರ್‌ಡಿ 42 ಎಲ್‌ಜಿಜೆ 2007ರಲ್ಲಿ ಅನುಮತಿ ನೀಡಲಾಗಿರುತ್ತದೆ.

8. ಕ್ರ.ಸಂ. 8ರ ಪತ್ರದಲ್ಲಿ ಜಿಲ್ಲಾಧಿಕಾರಿಗಳು ದಿನಾಂಕ : 25–09–2010ರ ಸರ್ಕಾರದ ಆದೇಶದನ್ವಯ 347.33 ಎಕರೆ ಸರ್ಕಾರಿ ಜಮೀನಿಗೆ ಸಂಬಂಧಿಸಿದಂತೆ, ಜಮೀನಿನ ಬೆಲೆ ಮತ್ತು ಇತರೆ ಶುಲ್ಕ ಸೇರಿ ಒಟ್ಟು ರೂ. 32,81,96,124–00 ಗಳನ್ನು ಪಾವತಿಸುವಂತೆ ಕೋರಿರುತ್ತಾರೆ.

9. ಕ್ರಮ ಸಂ. 9ರ ಪತ್ರದಲ್ಲಿ ಜಿಲ್ಲಾಧಿಕಾರಿಗಳು ಖಾಸಗಿ ಜಮೀನಿನ ಭೂಸ್ವಾಧೀನ ಪರಿಹಾರ ಪಾವತಿಗೆ ಬೇಡಿಕೆ ರೂ. 30,64,37,500ಗಳಾಗಿದ್ದು, ಈಗಾಗಲೇ ರೂ. 29,50,000/–ಗಳನ್ನು ಬಿಡುಗಡೆ ಮಾಡಲಾಗಿದ್ದು, ಬಾಕಿಯಿರುವ ರೂ. 1,14,37,500/–ಗಳನ್ನು ಬಿಡುಗಡೆ ಮಾಡುವಂತೆ ಕೋರಿದ್ದಾರೆ.

10. ಕ್ರ.ಸಂ. 10ರಲ್ಲಿ ಓದಲಾದ ಆದೇಶದಲ್ಲಿ ರೂ. 114.38 ಲಕ್ಷಗಳನ್ನು ಸಣ್ಣ ವಿಮಾನ ನಿಲ್ದಾಣಗಳ ಅಭಿವೃದ್ಧಿ ಲೆಕ್ಕ ಶೀರ್ಷಿಕೆಗೆ ಪುನರ್ ವಿನಿಯೋಗ ಮಾಡಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ಮೂಅಇ 88 ರಾಅವಿ 2003, ಬೆಂಗಳೂರು, ದಿನಾಂಕ: 10–02–2011.**

ಬಿಜಾಪುರ ವಿಮಾನ ನಿಲ್ದಾಣಕ್ಕಾಗಿ ಭೂಸ್ವಾಧೀನಪಡಿಸಿಕೊಳ್ಳಲು ಅವಶ್ಯವಿರುವ ಬಾಕಿ ಹಣ ರೂ. 114.38 ಲಕ್ಷಗಳನ್ನು ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿಯನ್ನು ನೀಡಿದೆ.

2. ಈ ಮೊತ್ತವನ್ನು ಲೆಕ್ಕ ಶೀರ್ಷಿಕೆ 5465–01–190–1–05–ಬಂಡವಾಳ ಹೂಡಿಕೆಯಡಿಯಲ್ಲಿ– ಸಣ್ಣ ವಿಮಾನ ನಿಲ್ದಾಣಗಳು (ಯೋಜನೆ) ಈ ಕೆಳಕಂಡ ಲೆಕ್ಕ ಶೀರ್ಷಿಕೆಯಿಂದ ಮರು ಹೊಂದಾಣಿಕೆ ಮೂಲಕ ಭರಿಸುವುದು.

i) 5465–01–190–2–05–211–Investment–ಬದಲಿ ರಸ್ತೆಗಳು (P)ರೂ. 114.38 ಲಕ್ಷಗಳು.

3. ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂ.ಆಇ 142 ವೆಚ್ಚ–1/11 ದಿನಾಂಕ : 31–01–2011ರಲ್ಲಿ ನೀಡಿದ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿ.ಎ. ಬಾಬುರವೀಂದ್ರನಾಥ್ ಪಟೇಲ್**

ಪಿ.ಆರ್. 519

ಸರ್ಕಾರದ ಅಧೀನ ಕಾರ್ಯದರ್ಶಿ

ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ

## ನಗರಾಭಿವೃದ್ಧಿ ಸಚಿವಾಲಯ

**ವಿಷಯ :** ಸೇಡಂ ನಗರದ ಸ್ಥಳೀಯ ಯೋಜನಾ ಪ್ರದೇಶದ ಮಹಾ ಯೋಜನೆಗೆ ಸರ್ಕಾರದ ಅಂತಿಮ ಅನುಮೋದನೆಯನ್ನು ನೀಡುವ ಬಗ್ಗೆ.

**ಓದಲಾಗಿದೆ :**

1. ಸರ್ಕಾರದ ಆದೇಶ ಸಂಖ್ಯೆ : ನಅಇ 129 ಬೆಮಪ್ರಾ 2007, ದಿನಾಂಕ : 15–06–2007.
2. ಸೇಡಂ ಪುರಸಭಾ ಯೋಜನಾ ಪ್ರಾಧಿಕಾರದ ಪತ್ರ ಸಂಖ್ಯೆ : ಪುಯೋಪ್ರಾ/ಸೇಡಂ.ಮ..ಯೋ/2009–10, ದಿನಾಂಕ : 24–02–2010.
3. ಸಹಾಯಕ ನಿರ್ದೇಶಕರು, ನಗರ ಮತ್ತು ಗ್ರಾಮಾಂತರ ಯೋಜನಾ ಇಲಾಖೆ, ಗುಲ್ಬರ್ಗಾ ಇವರ ಪತ್ರ ಸಂಖ್ಯೆ : ನಗ್ರಾಯೋ/ಸನಿ.ಗು/ಮಾವ/2010–11/206, ದಿನಾಂಕ : 19/05/2010.
4. ನಿರ್ದೇಶಕರು, ನಗರ ಮತ್ತು ಗ್ರಾಮಾಂತರ ಯೋಜನಾ ಇಲಾಖೆ ಇವರ ಏಕ ಕಡತ ಸಂಖ್ಯೆ : ನಗ್ರಾಯೋ/ಉನಿ (ಯೋವಿ) ಸೇಡಂ.ಮ.ಯೋ/29/2010, ದಿನಾಂಕ : 29–06–2010ರಲ್ಲಿ ನೀಡಿರುವ ಅಭಿಪ್ರಾಯ.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಾಂಕ (1)ರ ಸರ್ಕಾರದ ಆದೇಶದಲ್ಲಿ, ಸೇಡಂ ನಗರದ ಸ್ಥಳೀಯ ಯೋಜನಾ ಪ್ರದೇಶದ ಮಹಾ ಯೋಜನೆಗೆ ತಾತ್ಕಾಲಿಕ ಅನುಮೋದನೆಯನ್ನು ನೀಡಲಾಗಿದೆ.

ಮೇಲೆ ಓದಲಾದ ಕ್ರಮಾಂಕ (2)ರ ಪತ್ರದಲ್ಲಿ ಸೇಡಂ ಪುರಸಭಾ ಯೋಜನಾ ಪ್ರಾಧಿಕಾರವು ಸೇಡಂ ನಗರದ ಸ್ಥಳೀಯ ಯೋಜನಾ ಪ್ರದೇಶಕ್ಕೆ ತಯಾರಿಸಿರುವ ಮಹಾ ಯೋಜನೆಯ ಕುರಿತು ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ, 1961ರ ಕಲಂ 13(1)ರನ್ವಯ ಅಗತ್ಯ ಕ್ರಮ ಜರುಗಿಸಿ, ಮಹಾ ಯೋಜನೆಯ ನಕ್ಷೆಗಳನ್ನು ಹಾಗೂ ವರದಿಯನ್ನು ತಯಾರಿಸಿ ಸರ್ಕಾರದ ಅಂತಿಮ ಅನುಮೋದನೆಗೆ ಸಲ್ಲಿಸಿರುತ್ತಾರೆ.

ಮೇಲೆ ಓದಲಾದ ಕ್ರಮಾಂಕ (3)ರ ನಗರ ಮತ್ತು ಗ್ರಾಮಾಂತರ ಯೋಜನಾ ನಿರ್ದೇಶಕರ ಕಡತದಲ್ಲಿ ಸೇಡಂ ನಗರದ ಜನಸಂಖ್ಯೆಯು 2021ರಲ್ಲಿ 62,000ಗಳಷ್ಟು ಬೆಳವಣಿಗೆಯಾಗುವುದಾಗಿ ಅಂದಾಜಿಸಿ ಮಹಾ ಯೋಜನೆಯನ್ನು ತಯಾರಿಸಲಾಗಿದೆ. ಸೇಡಂ ನಗರದ ಸ್ಥಳೀಯ ಯೋಜನಾ ಪ್ರದೇಶದ ಒಟ್ಟು 809.00 ಹೆಕ್ಟೇರ್ ಪ್ರದೇಶವನ್ನು ನಗರದ ಅಭಿವೃದ್ಧಿಗಾಗಿ ನಗರೀಕರಣದ ಎಲ್ಲೆಯೆಂದು ಪ್ರಸ್ತಾಪಿಸಿ ಯೋಜನೆಯನ್ನು ರೂಪಿಸಲಾಗಿದೆ. ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ, 1961ರ ಕಲಂ (12)ರಲ್ಲಿನ ಅಂಶಗಳನ್ನು ಪರಿಗಣಿಸಿ, ಪಟ್ಟಣದ ಮುಂದಿನ ಯೋಜಿತ ಬೆಳವಣಿಗೆಗಳಿಗಾಗಿ ಪ್ರಸ್ತಾಪಿಸಿರುವ 809.00 ಹೆಕ್ಟೇರ್ ಪ್ರದೇಶದಲ್ಲಿ ವಸತಿಗಾಗಿ 310.00 ಹೆಕ್ಟೇರ್ (ಶೇ. 38.32), ವಾಣಿಜ್ಯಕ್ಕಾಗಿ 31.00 ಹೆಕ್ಟೇರ್ (ಶೇ. 3.83), ಕೈಗಾರಿಕೆಗಾಗಿ 145.00 ಹೆಕ್ಟೇರ್ (ಶೇ. 17.92) ಸಾರ್ವಜನಿಕ/ಅರೆಸಾರ್ವಜನಿಕಕ್ಕಾಗಿ 34.00 ಹೆಕ್ಟೇರ್ (ಶೇ. 4.20), ಉದ್ಯಾನವನ, ಆಟದ ಮೈದಾನ ಮತ್ತು ಬಯಲು ಪ್ರದೇಶಕ್ಕಾಗಿ 76.00 ಹೆಕ್ಟೇರ್ (ಶೇ.9.40), ಸಾರಿಗೆ/ಸಂಪರ್ಕ ವಲಯಕ್ಕೆ 211.00 ಹೆಕ್ಟೇರ್ (ಶೇ. 26.08), ನಾಗರೀಕ ಸೌಲಭ್ಯಕ್ಕೆ 2.00 ಹೆಕ್ಟೇರ್ (ಶೇ. 0.25) ಪ್ರದೇಶವನ್ನು ನಿಗದಿಪಡಿಸಿ ಮಹಾ ಯೋಜನೆಯನ್ನು ಅನುಷ್ಠಾನಕ್ಕೆ ತರಲು ಅಗತ್ಯವಿರುವ ವಲಯ ನಿಯಮಾವಳಿಗಳನ್ನು ರೂಪಿಸಲಾಗಿದ್ದು, ಸದರಿ ಮಹಾ ಯೋಜನೆಗೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ, 1961ರ ಕಲಂ 13(3)ರನ್ವಯ ಅಂತಿಮ ಅನುಮೋದನೆ ನೀಡಲು ಶಿಫಾರಸ್ಸು ಮಾಡಿ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಲಾಗಿದೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ನಂತರ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ನಅಇ 87 ಗುಅಪ್ರಾ 2010, ಬೆಂಗಳೂರು, ದಿನಾಂಕ: 14–02–2011.**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸೇಡಂ ನಗರದ ಸ್ಥಳೀಯ ಯೋಜನಾ ಪ್ರದೇಶಕ್ಕೆ ರೂಪಿಸಿರುವ ಮಹಾ ಯೋಜನೆಗೆ ಈ ಕೆಳಕಂಡ ಷರತ್ತಿಗೊಳಪಟ್ಟು ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಕಲಂ 13(1)ರನ್ವಯ ಅಂತಿಮ ಅನುಮೋದನೆಯನ್ನು ನೀಡಲಾಗಿದೆ.

**"ಈ ಆದೇಶದ ದಿನಾಂಕದಿಂದ 2 (ಎರಡು) ವರ್ಷಗಳವರೆಗೆ ಯೋಜನಾ ಪ್ರಾಧಿಕಾರವು ಯಾವುದೇ ತರಹದ ಭೂ ಉಪಯೋಗ ಬದಲಾವಣೆ ಪ್ರಸ್ತಾವನೆಗಳನ್ನು ಸರ್ಕಾರಕ್ಕೆ ಸಲ್ಲಿಸಕೂಡದು"**

ಮಹಾಯೋಜನೆಗೆ ಅಂತಿಮ ಅನುಮೋದನೆ ನೀಡಿದ ಗುರುತಾಗಿ ವರದಿ ಮತ್ತು ನಕ್ಷೆಗಳ ಮೇಲೆ ಸರ್ಕಾರದ ಮುದ್ರೆಯನ್ನು ಹಾಕಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 520

**ಎಂ.ಎಂ.ಹಿರೇಮಠ**

ಸರ್ಕಾರದ ಅಧೀನ ಕಾರ್ಯದರ್ಶಿ

ನಗರಾಭಿವೃದ್ಧಿ ಇಲಾಖೆ

**ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ, ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ**

**ವಿಷಯ :** ಮಂಗಳೂರಿನ ಪಿಲಿಕುಳ ಪ್ರಾದೇಶಿಕ ವಿಜ್ಞಾನ ಕೇಂದ್ರದ ಆವರಣದಲ್ಲಿ ನೂತನ ತಾರಾಲಯ (Planetarium) ಸ್ಥಾಪನೆಗೆ ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ :**

1. ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಗೆ ಸಂಬಂಧಿಸಿದಂತೆ ಸನ್ಮಾನ್ಯ ಮುಖ್ಯ ಮಂತ್ರಿಯವರ 2010-11ನೇ ಸಾಲಿನ ಆಯವ್ಯಯ ಭಾಷಣದ ಕಂಡಿಕೆ 158.
2. ದಿನಾಂಕ : 03-02-2011 ರಂದು ನಡೆದ ಸಚಿವ ಸಂಪುಟದ ಸಭೆಯ ನಿರ್ಣಯ (ಪ್ರಕರಣ ಸಂಖ್ಯೆ : ಸಿ:60/2011).

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ : 1ರಲ್ಲಿ 2010-11ನೇ ಸಾಲಿನ ಆಯವ್ಯಯ ಭಾಷಣದ ಕಂಡಿಕೆ 158 ರಲ್ಲಿ ಸನ್ಮಾನ್ಯ ಮುಖ್ಯ ಮಂತ್ರಿಯವರು "ಮಂಗಳೂರು ಬಳಿಯ ಪಿಲಿಕುಳದಲ್ಲಿ ನೂತನ ತಾರಾಲಯವನ್ನು ಸ್ಥಾಪಿಸಲು ರೂ. 1.00 ಕೋಟಿ ನೀಡಲಾಗುವುದು" ಎಂದು ಘೋಷಿಸಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ : 2ರಲ್ಲಿ ದಿನಾಂಕ : 03-02-2011 ರಂದು ನಡೆದ ಸಚಿವ ಸಂಪುಟದ 2011ನೇ ಸಾಲಿನ 3ನೇ ಸಭೆಯಲ್ಲಿ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಗೆ ಒಳಪಡುವ ಮಂಗಳೂರಿನ ಪಿಲಿಕುಳ ಪ್ರಾದೇಶಿಕ ವಿಜ್ಞಾನ ಕೇಂದ್ರದ ವತಿಯಿಂದ ವಿಜ್ಞಾನ ಕೇಂದ್ರದ ಆವರಣದಲ್ಲಿ ರೂ. 15.50 ಕೋಟಿಗಳ ವೆಚ್ಚದಲ್ಲಿ ಕೈಗೆತ್ತಿಕೊಳ್ಳಲು ಉದ್ದೇಶಿಸಿರುವ ನೂತನ ತಾರಾಲಯ (Planetarium) ಸ್ಥಾಪನೆಗೆ ಆಡಳಿತಾತ್ಮಕ ಅನುಮೋದನೆಯನ್ನು ನೀಡಿರುತ್ತದೆ.

ಸಚಿವ ಸಂಪುಟದ ನಿರ್ಣಯದನ್ವಯ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಗೆ ಒಳಪಡುವ ಮಂಗಳೂರಿನ ಪಿಲಿಕುಳ ಪ್ರಾದೇಶಿಕ ವಿಜ್ಞಾನ ಕೇಂದ್ರದ ವತಿಯಿಂದ ವಿಜ್ಞಾನ ಕೇಂದ್ರದ ಆವರಣದಲ್ಲಿ ರೂ. 15.50 ಕೋಟಿಗಳ ವೆಚ್ಚದಲ್ಲಿ ನೂತನ ತಾರಾಲಯ ಸ್ಥಾಪನೆಗೆ ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ ಪರಿಶೀಲಿಸಿದ ಸರ್ಕಾರ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ವಿಯಇ 182 ವಿತ್ರಮ 2009, ಬೆಂಗಳೂರು, ದಿನಾಂಕ: 09-02-2011.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಗೆ ಒಳಪಡುವ ಮಂಗಳೂರಿನ ಪಿಲಿಕುಳ ಪ್ರಾದೇಶಿಕ ವಿಜ್ಞಾನ ಕೇಂದ್ರ ಸೊಸೈಟಿ (ರಿ) ವತಿಯಿಂದ ಪ್ರಾದೇಶಿಕ ವಿಜ್ಞಾನ ಕೇಂದ್ರದ ಆವರಣದಲ್ಲಿ ರೂ. 15.50 ಕೋಟಿಗಳ ವೆಚ್ಚದಲ್ಲಿ ಕೈಗೆತ್ತಿಕೊಳ್ಳಲು ಉದ್ದೇಶಿಸಿರುವ ನೂತನ ತಾರಾಲಯವನ್ನು (Planetarium) ಕೆಳಕಂಡ ಯೋಜನಾ ವೆಚ್ಚದೊಂದಿಗೆ ಸ್ಥಾಪಿಸಲು ಆಡಳಿತಾತ್ಮಕ ಅನುಮೋದನೆಯನ್ನು ನೀಡಲಾಗಿದೆ.

(ರೂ. ಕೋಟಿಗಳಲ್ಲಿ)

| ಆರ್ಥಿಕ ಸಾಲು | ಪ್ರಾದೇಶಿಕ ವಿಜ್ಞಾನ ಕೇಂದ್ರ ಹಾಗೂ ಜಿಲ್ಲಾಧಿಕಾರಿಗಳು ಸಂಗ್ರಹಿಸಬೇಕಾದ ವಂತಿಗೆ | ರಾಜ್ಯ ಸರ್ಕಾರದ ಪಾಲು | ಒಟ್ಟು ಮೊತ್ತ |
|---|---|---|---|
| 2010-11 | ರೂ. 1.50 ಕೋಟಿ (3 ಎಕರೆ ಜಮೀನಿನ ಬೆಲೆ) | 1.00 | 2.50 |
| 2011-12 | ರೂ. 1.50 ಕೋಟಿ (ಜಿಲ್ಲಾಧಿಕಾರಿಗಳು ಮತ್ತು ಸ್ಥಳೀಯ ಸಂಸ್ಥೆಗಳಿಂದ ಸಂಗ್ರಹಿಸಬೇಕಾದ ಮೊತ್ತ) | 5.00 | 6.50 |
| 2012-13 | ರೂ. 1.50 ಕೋಟಿ (ಜಿಲ್ಲಾಧಿಕಾರಿಗಳು ಮತ್ತು ಸ್ಥಳೀಯ ಸಂಸ್ಥೆಗಳಿಂದ ಸಂಗ್ರಹಿಸಬೇಕಾದ ಮೊತ್ತ) | 5.00 | 6.50 |
| ಒಟ್ಟು | ರೂ. 4.50 ಕೋಟಿ | 11.00 | 15.50 |

ಈ ತಾರಾಲಯವನ್ನು ಮಂಗಳೂರಿನ ಪಿಲಿಕುಳ ಪ್ರಾದೇಶಿಕ ವಿಜ್ಞಾನ ಕೇಂದ್ರ ಸೊಸೈಟಿಯ ವಶದಲ್ಲಿರುವ 3 ಎಕರೆ ಜಮೀನಲ್ಲಿ ಸ್ಥಾಪಿಸತಕ್ಕದ್ದು.

ಮಂಗಳೂರಿನ ಪಿಲಿಕುಳ ಪ್ರಾದೇಶಿಕ ವಿಜ್ಞಾನ ಕೇಂದ್ರ ಸೊಸೈಟಿಯು ರೂ. 15.50 ಕೋಟಿಗಳ ಮೊತ್ತವನ್ನು ತಾರಾಲಯದ ನಿರ್ಮಾಣಕ್ಕಾಗಿ ಬಳಸತಕ್ಕದ್ದು.

ಈ ಆದೇಶವನ್ನು ದಿನಾಂಕ : 03-02-2011 ರಂದು ನಡೆದ ಸಚಿವ ಸಂಪುಟ ಸಭೆಯ ತೀರ್ಮಾನದನ್ವಯ ಹೊರಡಿಸಲಾಗಿದೆ. (ಪ್ರಕರಣ ಸಂಖ್ಯೆ : ಸಿ:60/2011)

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಬೋರಲಿಂಗಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ

ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ,

ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ

ಪಿ.ಆರ್. 521

**ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ, ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ**

**ವಿಷಯ :** ಕರ್ನಾಟಕ ನೈಸರ್ಗಿಕ ವಿಕೋಪ ಉಸ್ತುವಾರಿ ಕೇಂದ್ರದ ಮಾಸ್ಟರ್ ಕಂಟ್ರೋಲ್ ಫೆಸಿಲಿಟಿ (Master Control Centre) ಸ್ಥಾಪನೆಗೆ 2010-11ನೇ ಸಾಲಿನಲ್ಲಿ ಹೆಚ್ಚುವರಿ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :**

1. 2010-11ನೇ ಸಾಲಿನಲ್ಲಿ ಸನ್ಮಾನ್ಯ ಮುಖ್ಯ ಮಂತ್ರಿಯವರಿಂದ ಮಾಸ್ಟರ್ ಕಂಟ್ರೋಲ್ ಫೆಸಿಲಿಟಿ ಸ್ಥಾಪಿಸುವ ಬಗ್ಗೆ ಆಯವ್ಯಯ ಭಾಷಣ ಖಂಡಿಕೆ 159ರಲ್ಲಿ ಘೋಷಣೆ.
2. ಸರ್ಕಾರಿ ಆದೇಶ ಸಂಖ್ಯೆ : ವಿಯಇ 10 ಬಉಕೋ 2009, ದಿನಾಂಕ : 04-06-2010.
3. ನಿರ್ದೇಶಕರು, ಕರ್ನಾಟಕ ನೈಸರ್ಗಿಕ ವಿಕೋಪ ಉಸ್ತುವಾರಿ ಕೇಂದ್ರ, ಬೆಂಗಳೂರು, ಇವರ ಪತ್ರ ಸಂಖ್ಯೆ : KSNDMC/RGRHCL/110/2010-11/548, ದಿನಾಂಕ : 18-12-2010.
4. ಸರ್ಕಾರಿ ಆದೇಶ ಸಂಖ್ಯೆ : FD 274 BRS 2011, ದಿನಾಂಕ : 02-02-2011.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ : (1)ರಲ್ಲಿನ 2010–11ನೇ ಸಾಲಿನ ಆಯವ್ಯಯ ಭಾಷಣದ ಕಂಡಿಕೆ 159ರಲ್ಲಿ ಸನ್ಮಾನ್ಯ ಮುಖ್ಯ ಮಂತ್ರಿಯವರು ನೈಸರ್ಗಿಕ ವಿಪತ್ತುಗಳ ಮುನ್ಸೂಚನೆ ನೀಡುವ ಮಾಸ್ಟರ್ ಕಂಟ್ರೋಲ್ ಫೆಸಿಲಿಟಿ (Master Control Centre) ಸ್ಥಾಪಿಸುವ ಬಗ್ಗೆ ಆಯವ್ಯಯ ಭಾಷಣ ಖಂಡಿಕೆ 159ರಲ್ಲಿ ಘೋಷಿಸಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ : (2)ರಲ್ಲಿನ ಸರ್ಕಾರಿ ಆದೇಶದಲ್ಲಿ 2010ನೇ ಸಾಲಿನ ದಿನಾಂಕ : 24–05–2010ರಂದು ನಡೆದ ಸಚಿವ ಸಂಪುಟದ 7ನೇ ಸಭೆಯಲ್ಲಿ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಯ ಅಂಗ ಸಂಸ್ಥೆಯಾದ ಕರ್ನಾಟಕ ರಾಜ್ಯ ನೈಸರ್ಗಿಕ ವಿಕೋಪಗಳ ಉಸ್ತುವಾರಿ ಕೇಂದ್ರದ ವತಿಯಿಂದ ರೂ. 872.50 ಲಕ್ಷಗಳಲ್ಲಿ ಕರ್ನಾಟಕ ನೈಸರ್ಗಿಕ ವಿಕೋಪಗಳ ಉಸ್ತುವಾರಿ ಕೇಂದ್ರದ (Master Control Facility) ಸ್ಥಾಪನೆಗೆ ಆಡಳಿತಾತ್ಮಕ ಅನುಮೋದನೆಯನ್ನು ನೀಡಲಾಗಿರುತ್ತದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರಲ್ಲಿನ ಪತ್ರದಲ್ಲಿ ನಿರ್ದೇಶಕರು, ಕರ್ನಾಟಕ ನೈಸರ್ಗಿಕ ವಿಕೋಪ ಉಸ್ತುವಾರಿ ಕೇಂದ್ರ, ಬೆಂಗಳೂರು, ಇವರು ಮಾಸ್ಟರ್ ಕಂಟ್ರೋಲ್ ಫೆಸಿಲಿಟಿ ಸ್ಥಾಪನೆಗೆ ಕಟ್ಟಡ ನಿರ್ಮಾಣ, ಯಂತ್ರೋಪಕರಣ ಮುಂತಾದವುಗಳಿಗೆ ಅಂದಾಜು ರೂ. 872.50 ಲಕ್ಷಗಳಿಗೆ ಆಡಳಿತಾತ್ಮಕ ಅನುಮೋದನೆಯನ್ನು ನೀಡಲಾಗಿದೆ. ಆದ್ದರಿಂದ 2010–11ನೇ ಸಾಲಿಗೆ ಬೇಕಾದ ರೂ. 402.74 ಲಕ್ಷಗಳನ್ನು ಬಿಡುಗಡೆ ಮಾಡುವಂತೆ ಪ್ರಸ್ತಾವನೆ ಸಲ್ಲಿಸಿ ಕೋರಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (4)ರಲ್ಲಿನ ಆದೇಶದಲ್ಲಿ ಕರ್ನಾಟಕ ನೈಸರ್ಗಿಕ ವಿಕೋಪ ಉಸ್ತುವಾರಿ ಕೇಂದ್ರದ ವತಿಯಿಂದ ಮಾಸ್ಟರ್ ಕಂಟ್ರೋಲ್ ಫೆಸಿಲಿಟಿ (Master Control Centre) ಸ್ಥಾಪನೆಯ ಉದ್ದೇಶಕ್ಕಾಗಿ 2010–11ನೇ ಸಾಲಿನ ಪೂರಕ ಅಂದಾಜುಗಳ 3ನೇ ಕಂತಿನಲ್ಲಿ ಲೆಕ್ಕಶೀರ್ಷಿಕೆ 3455–00–200–0–01 Drought Monitoring Cell-059-Other Expenses (Plan) ಇದರಡಿ ಹೆಚ್ಚುವರಿಯಾಗಿ ರೂ. 100.00 ಲಕ್ಷಗಳನ್ನು ಆರ್ಥಿಕ ಇಲಾಖೆಯು ಬಿಡುಗಡೆ ಮಾಡಿರುವುದನ್ನು ಪರಿಶೀಲಿಸಿದ ಸರ್ಕಾರ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ವಿಯಇ 10 ಬಉಕೋ 2009 (ಭಾಗ), ಬೆಂಗಳೂರು, ದಿನಾಂಕ: 07–02–2011.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಯ ಅಂಗ ಸಂಸ್ಥೆಯಾದ ಕರ್ನಾಟಕ ರಾಜ್ಯ ನೈಸರ್ಗಿಕ ವಿಕೋಪಗಳ ಉಸ್ತುವಾರಿ ಕೇಂದ್ರ, ಬೆಂಗಳೂರು, ಈ ಸಂಸ್ಥೆ ವತಿಯಿಂದ ಮಾಸ್ಟರ್ ಕಂಟ್ರೋಲ್ ಫೆಸಿಲಿಟಿ (Master Control Centre) ಕಟ್ಟಡ ನಿರ್ಮಾಣ, ಯಂತ್ರೋಪಕರಣ ಮುಂತಾದವುಗಳ ಸ್ಥಾಪನೆಗೆ ಲೆಕ್ಕಶೀರ್ಷಿಕೆ 3455–00–200–0–01 Drought Monitoring Cell-059-Other Expenses (Plan) ಇದರಡಿ ಹೆಚ್ಚುವರಿಯಾಗಿ ರೂ. 100.00 ಲಕ್ಷಗಳನ್ನು (ರೂಪಾಯಿ ನೂರು ಲಕ್ಷಗಳು ಮಾತ್ರ) ನಿರ್ದೇಶಕರು, ಕರ್ನಾಟಕ ನೈಸರ್ಗಿಕ ವಿಕೋಪ ಉಸ್ತುವಾರಿ ಕೇಂದ್ರ, ಬೆಂಗಳೂರು, ಇವರಿಗೆ ಕೆಳಕಂಡ ಷರತ್ತು ಮತ್ತು ನಿಬಂಧನೆಗಳಿಗೆ ಒಳಪಟ್ಟು ಅನುದಾನವನ್ನು ಬಿಡುಗಡೆ ಮಾಡಲಾಗಿದೆ.

1) ಈ ಮೊತ್ತವನ್ನು 2010–11ನೇ ಸಾಲಿನ ಆಯವ್ಯಯ ಲೆಕ್ಕಶೀರ್ಷಿಕೆ 3455–00–200–0–01 Drought Monitoring Cell-059-Other Expenses (Plan) ಇದರಡಿ ಭರಿಸತಕ್ಕದ್ದು.
2) ನಿರ್ದೇಶಕರು, ಕರ್ನಾಟಕ ರಾಜ್ಯ ನೈಸರ್ಗಿಕ ವಿಕೋಪ ಉಸ್ತುವಾರಿ ಕೇಂದ್ರ, ಬೆಂಗಳೂರು, ಇವರು ಸ್ವೀಕೃತಿ ರಶೀದಿಯಲ್ಲಿ ಹಣವನ್ನು ಸರ್ಕಾರದ ಅಧೀನ ಕಾರ್ಯದರ್ಶಿಯವರ ಮೇಲುರುಜುವಿನೊಂದಿಗೆ ಹಣ ಸೆಳೆಯಬಹುದು.
3) ಈಗ ಬಿಡುಗಡೆ ಮಾಡಿದ ಹಣವನ್ನು ಅದೇ ಉದ್ದೇಶಕ್ಕೆ ಉಪಯೋಗಿಸತಕ್ಕದ್ದು ಮತ್ತು ಸಂಪೂರ್ಣವಾಗಿ ಉಪಯೋಗ ಮಾಡಿದ ಬಗ್ಗೆ ಪ್ರಮಾಣ ಪತ್ರ ಹಾಗೂ ಆಡಿಟ್ ಆದ ಲೆಕ್ಕ ಪತ್ರಗಳನ್ನು ದೃಢೀಕರಣದೊಂದಿಗೆ ದಿನಾಂಕ : 30–05–2011ರ ಒಳಗೆ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.
4) ಈಗ ಬಿಡುಗಡೆ ಮಾಡಿದ ಹಣವನ್ನು ಉದ್ದೇಶಿತ ಯೋಜನೆಗೆ ಮಾತ್ರ ಉಪಯೋಗಿಸತಕ್ಕದ್ದು, ಹಾಗೂ ಈ ಹಣವನ್ನು ಬೇರೆ ಯೋಜನೆಗೆ ಸರ್ಕಾರದ ಪೂರ್ವಾನುಮತಿ ಇಲ್ಲದೆ ವರ್ಗಾಯಿಸಬಾರದು.
5) ಅನುದಾನವನ್ನು ಬಳಸದೇ ಬ್ಯಾಂಕಿನಲ್ಲಿ ಠೇವಣಿ ಮಾಡಿದ ಪಕ್ಷದಲ್ಲಿ ಅದನ್ನು ಸರ್ಕಾರದ ಗಮನಕ್ಕೆ ತರತಕ್ಕದ್ದು ಇಲ್ಲವಾದಲ್ಲಿ ಅಂತಹ ಠೇವಣಿ ಮೊತ್ತಕ್ಕೆ ದೊರೆಯುವ ಬಡ್ಡಿಯನ್ನು ಸಂಸ್ಥೆಗೆ ಆದಾಯವೆಂದು ಪರಿಗಣಿಸಿ, ಮುಂದೆ ಅನುದಾನ ಬಿಡುಗಡೆ ಸಂದರ್ಭದಲ್ಲಿ ಸದರಿ ಮೊತ್ತವನ್ನು ಕಡಿತಗೊಳಿಸಲಾಗುವುದು.
6) ಉದ್ದೇಶಿತ ಕಾರ್ಯಕ್ರಮಕ್ಕೆ ಬಿಡುಗಡೆ ಮಾಡಲಾದಂತಹ ಅನುದಾನದ ಲೆಕ್ಕಪತ್ರಗಳನ್ನು ಮಂಜೂರು ಮಾಡುವ ಅಧಿಕಾರಿಯು ಸಮೀಕ್ಷೆಗಾಗಿ ಕೋರಿದ್ದಲ್ಲಿ ತಪ್ಪದೇ ಒದಗಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : FD 37 Exp-2/2011, ದಿನಾಂಕ : 03–02–2011ರಲ್ಲಿ ನೀಡಲಾದ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಬೋರಲಿಂಗಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ

ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ,

ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ

ಪಿ.ಆರ್. 522

## ENERGY SECRETARIAT

**Sub:** Enhancement of wind power capacity from 6.00 MW to 77.4 MW in favour of M/s Sarjan Realities Limited-reg.

Read: 1. Government Order No : EN 60 NCE 2005, dated : 22-03-2005.

2. Letter No : KRED/08/SRL-Vol-IV/2010/1755 dated : 08/10-06-2010 received from the Managing Director, Karnataka Renewable Energy Development Limited, Bangalore.

3. Letter No : KRED/08/SRL-Vol-IV/2010/2860 dated : 08-10-2010 received from the Managing Director, Karnataka Renewable Energy Development Limited, Bangalore.

**Preamble:**

In the Government Order read at (1) above, sanction has been accorded for implementation of 34.8 MW capacity wind power project at Bellary, Chitradurga and Davanagere Districts in favour of M/s Sarjan Realities Limited.

The Managing Director, Karnataka Renewable Energy Development Limited, Bangalore vide his letter read at (2) above, has recommended to enhance the wind power capacity from 20.4 MW to 216 MW (part capacity of 34.8 MW) at Gurushantanahalli, Kamabatarahalli, Jittinkatti, North RF, Chikka Tanda, Balenahalli (Jittinkatti South RF), Kanchikeri, Chinnapura (Uchangidurga RF) in Davanagere District. Further the Managing Director, Karnataka Renewable Energy Development Limited, Bangalore vide his letter read at (3) above, has partially modified the earlier recommendation and recommended for enhancement of capacity from 6.00 MW (part capacity of 34.8 MW) to 77.4 MW at Machinahalli, Harapanahalli, Kambatrahalli, Gundagthi villages (4.8 MW) and Jittinakatti village (1.2 MW) of Davanagere District in favour of M/s Sarjan Realities Limited.

The proposal has been examined in detail and issued following Order :-

**Government Order No.: EN 246 NCE 2010, Bangalore, Dated: 15-02-2011**

Government accords approval for enhancement of wind power capacity from 6.00 MW (4.8+1.2=6MW part capacity of 34.8 MW) to 77.4 MW at Machinahalli, Harapanahalli, Kambatrahalli, Gundagthi villages (4.8 MW) and Jittinakatti village (1.2 MW) of Davanagere District in favour of M/s Sarjan Realities Limited as detailed below :-

| Geographical Area details | Sanctioned capacity in MW | Enhancement proposed in stage-1 | No. of WTGs | Sy.No. & villages | Total capacity including proposed enhancement |
|---|---|---|---|---|---|
| A large plateau is spread across and situated between Gurusantanahalli and Kambatarahalli. The area is narrated as open scrub with 722, 677, 701 and 777m peaks. The entire area is covered in the following geographical co-ordinates :-<br>Lattitude : $14^0$41'54"-45'N<br>Longitude : $75^0$55'76E<br>Ridge Peaks : 722,677,701 & 777m elevation<br>Toposheet No : 48N/14 | 4.8 MW | 41.1 MW | 21*2.1 MW & 3*600 KW | 1. Machihalli Sy.No. 353.<br>2. Harapanahalli Sy.No. 492<br>3. Kambatrahalli Sy.No. 01<br>4. Gundagathi Sy.No. 324 | 45.9 MW |

| Geographical Area details | Sanctioned capacity in MW | Enhancement proposed in stage-1 | No. of WTGs | Sy.No. & villages | Total capacity including proposed enhancement |
|---|---|---|---|---|---|
| On east west and Northwest-South oriented two ridge are located on the east of Chikkatanda and Barenahalli. The area is narrated as Jittinakatti south RF and has 692 m peak. The potential area is covered in the following geographical co-ordinates :-<br>Lattitude : $14^0$38'12"-41'N<br>Longitude : $75^0$58'27-$76^0$E<br>Ridge Peaks : 692 elevation<br>Toposheet No : 48N/14 | 1.20 | 30.3 | 15*2.1 MW | Jittinakatti South RF | 31.5 |

The Government has reserved the right to Cancel/Modify this Order.

The other terms and conditions of the allotment Order read at (1) above shall continue as it is.

By Order and in the name of the Governor of Karnataka

PR No. 523

**Suresh B. Krishnappanavar**

Under Secretary to Government,

Energy Department

## ಇಂಧನ ಸಚಿವಾಲಯ

**ವಿಷಯ :** ಮೆ॥ ಶ್ರೀ ಸ್ವರ್ಣ ಗ್ರೀನ್ ಪವರ್ ಇವರಿಗೆ ಹಂಚಿಕೆಯಾಗಿ, ರದ್ದುಪಡಿಸಲಾಗಿರುವ 7.00 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ರದ್ದತಿ ಆದೇಶವನ್ನು ಹಿಂಪಡೆದು, ಯೋಜನೆಯ ಅನುಷ್ಠಾನಕ್ಕಾಗಿ ಕಾಲಾವಕಾಶ ವಿಸ್ತರಣೆ ಬಗ್ಗೆ

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಇಂಇ 216 ಎನ್‌ಸಿಇ 2001, ದಿನಾಂಕ: 19–07–2002.
2. ಸರ್ಕಾರದ ಆದೇಶ ಸಂಖ್ಯೆ: ಇಎನ್ 80 ಎನ್‌ಸಿಇ 2008, ದಿನಾಂಕ: 22–02–2008.
3. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/06//ಎಸ್‌ಹೆಚ್‌ಪಿ/08/2029 ದಿನಾಂಕ: 02/03.12.2008.
4. ಕಾರಣ ಕೇಳುವ ನೋಟೀಸು ಸಂಖ್ಯೆ: ಇಎನ್ 492 ಎನ್‌ಸಿಇ 2008 ದಿನಾಂಕ: 27.12.2008.
5. ಸರ್ಕಾರಿ ಆದೇಶ ಸಂಖ್ಯೆ: ಇಎನ್ 492 ಎನ್‌ಸಿಇ 2008 ದಿನಾಂಕ: 08.05.2009.
6. ಮೆ॥ ಶ್ರೀ ಸ್ವರ್ಣ ಗ್ರೀನ್ ಪವರ್ ಇವರ ಪತ್ರ ದಿನಾಂಕ: 06.07.2009.
7. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರಗಳ ಸಂಖ್ಯೆ: ಕೆಆರ್‌ಇಡಿ/08/ಎಸ್‌ಎಸ್‌ಆರ್‌ಪಿ–ಎಸ್‌ಆರ್‌ಆರ್/2009/2734 ದಿನಾಂಕ: 22/24.08.2009, ಸಂಖ್ಯೆ: ಕೆಆರ್‌ಇಡಿ/08/ ಎಸ್‌ಎಸ್‌ಜಿಪಿ /2009/2919 ದಿನಾಂಕ: 05/07.09.2009 ಮತ್ತು ಕೆಆರ್‌ಇಡಿ /08/ಎಸ್‌ಜಿಪಿ/2009/3728 ದಿನಾಂಕ: 12/13.11.2009.
8. ಸರ್ಕಾರದ ಪತ್ರ ಸಂಖ್ಯೆ: ಇಎನ್ 438 ಎನ್‌ಸಿಇ 2009 ದಿನಾಂಕ: 26.12.2009.
9. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/08/ಎಸ್‌ಜಿಪಿ/2009/73 ದಿನಾಂಕ: 08/12.01.2010.
10. ದಿನಾಂಕ: 19.04.2010 ರಂದು ನಡೆದ ರಿವ್ಯೂ ಸಭೆಯ ನಡವಳಿಗಳು.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ ಮೆ॥ ಎಸ್.ಆರ್.ಆರ್. ಪವರ್ ಜೆನ್ ಕಂಪನಿಗೆ 7.00 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಬೆಳಗಾಂ ಜಿಲ್ಲೆಯ ರಾಯಭಾಗ ತಾಲ್ಲೂಕಿನ ಮಾವಿನಹುಂಡದಲ್ಲಿ ಕೆಲವೊಂದು ನಿಬಂಧನೆಗಳಿಗೊಳಪಟ್ಟು ಹಂಚಿಕೆ ಮಾಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಆದೇಶದಲ್ಲಿ ಮೆ॥ ಎಸ್.ಆರ್.ಆರ್. ಪವರ್ ಜೆನ್ ಕಂಪನಿಗೆ ಹಂಚಿಕೆಯಾದ ಸಂಪೂರ್ಣ 7.00 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಮೆ॥ ಶ್ರೀ ಸ್ವರ್ಣ ಗ್ರೀನ್ ಪವರ್ ಇವರಿಗೆ ವರ್ಗಾವಣೆ ಮಾಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (3) ರ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ, ಬೆಂಗಳೂರು ಇವರು ಸದರಿ ಅಭಿವೃದ್ಧಿದಾರರಿಗೆ ಯೋಜನೆ ಹಂಚಿಕೆಯಾಗಿ 7 ವರ್ಷ ಕಳೆದರೂ ಯೋಜನೆಯ ಅನುಷ್ಠಾನದ ನಿಟ್ಟಿನಲ್ಲಿ ಯಾವುದೇ ಪ್ರಗತಿ ಸಾಧಿಸಿರುವುದಿಲ್ಲವೆಂದು ತಿಳಿಸುತ್ತಾ, ಸದರಿ ಯೋಜನೆಯ ಹಂಚಿಕೆ ಆದೇಶವನ್ನು ರದ್ದು ಪಡಿಸುವಂತೆ ಹಾಗೂ ಒಡಂಬಡಿಕೆಯನ್ನು ಮುಕ್ತಾಯಗೊಳಿಸುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಯೋಜನೆಯ ಅನುಷ್ಠಾನಕ್ಕಾಗಿ ಅನುಮತಿ ನೀಡಿ 7 ವರ್ಷ ಕಳೆದರೂ ಇದುವರೆಗೂ ಅನುಷ್ಠಾನ ನಿಟ್ಟಿನಲ್ಲಿ ಮೆ॥ ಶ್ರೀ ಸ್ವರ್ಣ ಗ್ರೀನ್ ಪವರ್ ಕಂಪನಿಯು ಯಾವುದೇ ಕ್ರಮ ಕೈಗೊಳ್ಳದೇ ಇರುವುದರಿಂದ ಮೇಲೆ ಓದಲಾದ ಕ್ರಮ ಸಂಖ್ಯೆ (4)ರ ಕಾರಣ ಕೇಳುವ ನೋಟೀಸಿನಲ್ಲಿ ಯೋಜನೆಯ ಹಂಚಿಕೆಯನ್ನು ಏಕೆ ರದ್ದು ಪಡಿಸಬಾರದೆಂಬುದಕ್ಕೆ ಕಾರಣವನ್ನು ಕೇಳಲಾಗಿತ್ತು. ಆದರೆ, ಕಾರಣ ಕೇಳುವ ನೋಟೀಸು ಲಕೋಟೆಯು 'No such firm in this door number return to sender' ಎಂದು ವಾಪಸ್ ಬಂದಿರುತ್ತದೆ. ಇದರಿಂದಾಗಿ ಅಭಿವೃದ್ಧಿದಾರರು ಸದರಿ ವಿಳಾಸದಲ್ಲಿ ವಾಸ್ತವ್ಯ ಇಲ್ಲದಿರುವುದು ಹಾಗೂ ಸುಮಾರು 7 ವರ್ಷಗಳಿಂದ ಯೋಜನೆಯ ಅನುಷ್ಠಾನಗೊಳಿಸುವ ನಿಟ್ಟಿನಲ್ಲಿ ಮೆ॥ ಶ್ರೀ ಸ್ವರ್ಣ ಗ್ರೀನ್ ಪವರ್ ಕಂಪನಿಯವರು ಯಾವುದೇ ಪ್ರಗತಿ ಸಾಧಿಸಿಲ್ಲದಿರುವುದರಿಂದ ಮೇಲೆ ಓದಲಾದ ಕ್ರಮ ಸಂಖ್ಯೆ (5)ರ ಆದೇಶದಲ್ಲಿ ಮೆ॥ ಶ್ರೀ ಸ್ವರ್ಣ ಗ್ರೀನ್ ಪವರ್ ಇವರಿಗೆ ಬೆಳಗಾವಿ ಜಿಲ್ಲೆಯ ರಾಯಭಾಗ ತಾಲ್ಲೂಕಿನ ಮಾವಿನಹುಂಡದಲ್ಲಿ ಹಂಚಿಕೆ ಮಾಡಿದ್ದ 7.00 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ಹಂಚಿಕೆ ಆದೇಶ ಮತ್ತು ಈ ಸಂಬಂಧ ಮಾಡಿಕೊಂಡಿದ್ದು ಒಡಂಬಡಿಕೆಯನ್ನು ರದ್ದು ಪಡಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (6)ರ ಪತ್ರದಲ್ಲಿ ಮೆ॥ ಶ್ರೀ ಸ್ವರ್ಣ ಗ್ರೀನ್ ಪವರ್ ಇವರು ಯೋಜನೆಯ ಅನುಷ್ಠಾನದ ನಿಟ್ಟಿನಲ್ಲಿ ಪ್ರಗತಿ ಸಾಧಿಸಿದ್ದು, ಯೋಜನೆಯ ರದ್ದತಿ ಆದೇಶವನ್ನು ಹಿಂಪಡೆಯಬೇಕೆಂದು ಕೋರಿದ್ದಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (7)ರ ಪತ್ರಗಳಲ್ಲಿ ಯೋಜನೆಯ ಅನುಷ್ಠಾನದ ನಿಟ್ಟಿನಲ್ಲಿ ಅಭಿವೃದ್ಧಿದಾರರು ಎಲ್ಲಾ ಸಿದ್ದತೆಗಳನ್ನು ಮಾಡಿಕೊಂಡಿದ್ದು, ಒಂದು ವರ್ಷದ ಕಾಲಾವಧಿಯಲ್ಲಿ ವಿದ್ಯುತ್ ಉತ್ಪಾದನೆಯನ್ನು ಪ್ರಾರಂಭಿಸುವುದಾಗಿ ತಿಳಿಸಿರುವ ಹಿನ್ನೆಲೆಯಲ್ಲಿ ಈ ಯೋಜನೆಯನ್ನು ಪುನಶ್ಚೇತನಗೊಳಿಸುವಂತೆ ವ್ಯವಸ್ಥಾಪಕ ನಿರ್ದೇಶಕರು, ಕೆ.ಆರ್.ಇ.ಡಿ.ಎಲ್. ಇವರು ಅಭಿವೃದ್ಧಿದಾರರ ಕೋರಿಕೆಯ ಮೇರೆಗೆ ಶಿಫಾರಸ್ಸು ಮಾಡಿ ಸರ್ಕಾರಕ್ಕೆ ಕಳುಹಿಸಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (8)ರ ಸರ್ಕಾರಿ ಪತ್ರದಲ್ಲಿ ಸದರಿ ಅಭಿವೃದ್ಧಿದಾರರು ಯೋಜನೆಯ ಕುರಿತು ಡಿ.ಪಿ.ಆರ್. ತಯಾರಿಸಿದ್ದಲ್ಲಿ ಅದರ ಪ್ರತಿಯನ್ನು ಒದಗಿಸುವಂತೆ ಕೆ.ಆರ್.ಇ.ಡಿ.ಎಲ್.ನ ವ್ಯವಸ್ಥಾಪಕ ನಿರ್ದೇಶಕರನ್ನು ಕೋರಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (9)ರ ಪತ್ರದೊಂದಿಗೆ ಕೆ.ಆರ್.ಇ.ಡಿ.ಎಲ್. ವ್ಯವಸ್ಥಾಪಕ ನಿರ್ದೇಶಕರು ಡಿ.ಪಿ.ಆರ್.ನ್ನು ಕಳುಹಿಸಿಕೊಟ್ಟಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (10)ರಲ್ಲಿ ನಡೆದ ರಿವ್ಯೂ ಸಭೆಯ ನಿರ್ಣಯವು ಈ ಕೆಳಗಿನಂತಿದೆ.

> "It has a 7 MW capacity Wind Project at Mavinahunda, Belgaum District. The appraisal on the project was made to the committee by GGM, stating that M/s Swarna Green Power obtained 7 MW wind power project under transfer mode and has a valid agreement till 2nd April 2011. Further

the company has possessed the private land area about 35 acres. WTG locations are finalised after micro-siting, power evacuation approval obtained and other related work is in progress. The representative of the firm presented in the meeting that the project finance is being arranged and the project will be commissioned by April 2011 and other requirement components of the projects are in the advanced stage.

Referring to the above the committee permitted the firm to develop the project before March 2011 instead of April 2011 and imposed a binding condition, it has to pay a penalty of Rs. 1.00 lakh per MW to KREDL. Project remained un-commissioned by end of March 2011, the amount will be transferred to Akshaya Shakthi Nidhi in KREDL and the project will be cancelled."

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 438 ಎನ್‌ಸಿಇ 2009, ಬೆಂಗಳೂರು, ದಿನಾಂಕ 28–02–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಸರ್ಕಾರದ ಆದೇಶ ಸಂಖ್ಯೆ: ಇಎನ್ 492 ಎನ್‌ಸಿಇ 2008 ದಿನಾಂಕ: 08.05.2009ರಲ್ಲಿ ಮೆ॥ ಶ್ರೀ ಸ್ವರ್ಣ ಗ್ರೀನ್ ಪವರ್ ಇವರಿಗೆ ಬೆಳಗಾವಿ ಜಿಲ್ಲೆಯ ರಾಯಭಾಗ ತಾಲ್ಲೂಕಿನ ಮಾವಿನಹುಂಡದಲ್ಲಿ ರದ್ದುಗೊಳಿಸಿರುವ 7.00 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ರದ್ದತಿ ಆದೇಶವನ್ನು ಹಿಂಪಡೆದು ಯೋಜನೆಯನ್ನು ಪೂರ್ವಸ್ಥಿತಿಗೆ ತರಲಾಗಿದೆ. ಈ ಯೋಜನೆಯ ಅನುಷ್ಠಾನಕ್ಕೆ ಕಾಲಾವಕಾಶವನ್ನು ದಿನಾಂಕ: 30.04.2011 ರವರೆಗೆ ಈ ಕೆಳಗಿನ ನಿಬಂಧನೆಗಳಿಗೊಳಪಟ್ಟು ವಿಸ್ತರಿಸಲಾಗಿದೆ.

1. ಪ್ರತಿ ಮೆಗಾ ವ್ಯಾಟ್ ಒಂದಕ್ಕೆ ರೂ. 1.00 ಲಕ್ಷದಂತೆ ದಂಡ ಶುಲ್ಕವನ್ನು ಪಾವತಿಸತಕ್ಕದ್ದು.
2. ಈ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿನ ಇತರೆ ನಿಬಂಧನೆಗಳು ಯಥಾವತ್ತಾಗಿ ಮುಂದುವರೆಯುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸುರೇಶ್ ಬಿ. ಕೃಷ್ಣಪ್ಪನವರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ

ಪಿ.ಆರ್. 631

## ಕಂದಾಯ ಸಚಿವಾಲಯ

**ವಿಷಯ :** ಕೊಡಗು ಜಿಲ್ಲೆ, ಮಡಿಕೇರಿ ತಾಲ್ಲೂಕು, ಕೆ. ನಿಡುಗಣೆ ಗ್ರಾಮದ ಸ.ನಂ.1/11ರಲ್ಲಿ 4.60 ಎಕರೆ ಜಮೀನನ್ನು ಕೇಂದ್ರೀಯ ವಿದ್ಯಾಲಯಕ್ಕೆ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :** ಜಿಲ್ಲಾಧಿಕಾರಿಗಳು, ಕೊಡಗು ಜಿಲ್ಲೆ ಇವರ ಪತ್ರ ಸಂಖ್ಯೆ: ಜಾಗ (1) ಮಂಜೂರಾತಿ–13/06–07, ದಿ: 19.01.2010.

**ಪ್ರಸ್ತಾವನೆ:**

ಜಿಲ್ಲಾಧಿಕಾರಿಗಳು, ಕೊಡಗು ಜಿಲ್ಲೆ ಇವರು ಮೇಲೆ ಓದಲಾದ ದಿ: 19.01.2010ರ ಪತ್ರದಲ್ಲಿ ಮಡಿಕೇರಿ ತಾಲ್ಲೂಕು, ಕೆ. ನಿಡುಗಣೆ ಗ್ರಾಮದ ಸ.ನಂ.1/11ರಲ್ಲಿ 4.60 ಎಕರೆ ಜಮೀನನ್ನು ಕೇಂದ್ರಿಯ ವಿದ್ಯಾಲಯಕ್ಕೆ ಮಂಜೂರು ಮಾಡುವ ಬಗ್ಗೆ ಸರ್ಕಾರದ ಆದೇಶ ಕೋರಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಜಿಲ್ಲಾಧಿಕಾರಿಗಳ ವರದಿಯನ್ವಯ ಮಡಿಕೇರಿ ತಾಲ್ಲೂಕು, ಕೆ. ನಿಡುಗಣೆ ಗ್ರಾಮದ ಸ.ನಂ.1/11ರ ಜಮೀನಿನ ಪೈಕಿ 4 ಎಕರೆ 60 ಸೆಂಟ್ ಜಮೀನನ್ನು ಕೇಂದ್ರಿಯ ವಿದ್ಯಾಲಯಕ್ಕೆ ಮಂಜೂರು ಮಾಡಲು ಕೇಂದ್ರಿಯ ವಿದ್ಯಾಲಯ, ಪ್ರಾದೇಶಿಕ ಕಛೇರಿ, ಬೆಂಗಳೂರು ಇವರು ಕೋರಿರುತ್ತಾರೆ. ಕರ್ನಾಟಕ ಭೂ ಕಂದಾಯ ಕಾಯ್ದೆಯ ಕಲಂ 71ರನ್ವಯ ಕೇಂದ್ರ ಸರ್ಕಾರದ ಸಂಸ್ಥೆಯಾಗಿರುವ ಕಾರಣ ಮಡಿಕೇರಿ ತಾಲ್ಲೂಕು, ಕೆ. ನಿಡುಗಣೆ ಗ್ರಾಮದ ಸ.ನಂ.1/11ರಲ್ಲಿ 4.60 ಎಕರೆ ಜಮೀನನ್ನು ಕೇಂದ್ರಿಯ ವಿದ್ಯಾಲಯಕ್ಕೆ ಕಾಯ್ದಿರಿಸಿರುವುದಾಗಿ ತಿಳಿಸಿರುತ್ತಾರೆ. ಸದರಿ ಸಂಸ್ಥೆಯವರು ಮಂಜೂರಾತಿ ಆದೇಶ ನೀಡುವಂತೆ ಕೋರಿರುವುದರಿಂದ ಕರ್ನಾಟಕ ಭೂ ಮಂಜೂರಾತಿ ನಿಯಮಗಳು 1969ರ ನಿಯಮ 27ರನ್ವಯ ವಿಶೇಷ ಪ್ರಕರಣವೆಂದು ಪರಿಗಣಿಸಿ ಕೇಂದ್ರಿಯ ವಿದ್ಯಾಲಯಕ್ಕೆ ಮುಫತ್ತಾಗಿ ಮಂಜೂರು ಮಾಡಲು ಕೋರಿರುತ್ತಾರೆ.

ಮೇಲ್ಕಂಡ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿದೆ. ಅದರಂತೆ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಆರ್‌ಡಿ 46 ಎಲ್‌ಜಿಬಿ 2010, ಬೆಂಗಳೂರು, ದಿನಾಂಕ 01–03–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಕೊಡಗು ಜಿಲ್ಲೆ, ಮಡಿಕೇರಿ ತಾಲ್ಲೂಕು, ಕೆ. ನಿಡುಗಣೆ ಗ್ರಾಮದ ಸ.ನಂ.1/11ರಲ್ಲಿ 4.60 ಎಕರೆ ಜಮೀನನ್ನು ಕೇಂದ್ರಿಯ ವಿದ್ಯಾಲಯಕ್ಕಾಗಿ ರಾಜ್ಯ ಸರ್ಕಾರಿ ನೌಕರರ ಮಕ್ಕಳಿಗೆ ಶಾಲಾ ಪ್ರವೇಶ ಸಂದರ್ಭದಲ್ಲಿ ಆದ್ಯತೆಯನ್ನು ನೀಡಬೇಕೆನ್ನುವ ಷರತ್ತನ್ನು ವಿಧಿಸಿ ಮಂಜೂರು ಮಾಡಲು ಸರ್ಕಾರವು ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ ಆಇ 628 ವೆಚ್ಚ–7/2010, ದಿ: 29.01.2010ರಲ್ಲಿ ನೀಡಿದ ಸಹಮತಿಯನುಸಾರ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಗೀತಾ ರಮೇಶ್**
ಸರ್ಕಾರದ ಉಪ ಕಾರ್ಯದರ್ಶಿ
ಕಂದಾಯ ಇಲಾಖೆ (ಭೂ.ಮಂ ಮತ್ತು ಭೂ ಕಂ)

ಪಿ.ಆರ್. 632

## ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ

**ವಿಷಯ :** ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನ ಮಠ, ಗದಗ ಇಲ್ಲಿ ಭವ್ಯವಾದ ಮತ್ತು ಕಲಾತ್ಮಕವಾದ ವಸ್ತು ಸಂಗ್ರಹಾಲಯವನ್ನು ಸ್ಥಾಪಿಸಲು ಅಂದಾಜು ಪಟ್ಟಿಗೆ ಆಡಳಿತಾತ್ಮಕ ಅನುಮೋದನೆ ನೀಡುವ ಕುರಿತು.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ ಕಸಂವಾಪ್ರ 100 ಕೆಎಂಯು 2010, ದಿನಾಂಕ 25.10.2010.

2. ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಇವರ ಪತ್ರ ಸಂಖ್ಯೆ ಕಸನಿ:ವಸ್ತು ಸಂಗ್ರ:17:2010–11, ದಿನಾಂಕ 25.02.2011.

**ಪ್ರಸ್ತಾವನೆ:**

ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನ ಮಠ, ಗದಗ ಇಲ್ಲಿ ಭವ್ಯವಾದ ಮತ್ತು ಕಲಾತ್ಮಕವಾದ ವಸ್ತು ಸಂಗ್ರಹಾಲಯವನ್ನು ಸ್ಥಾಪಿಸಲು ರೂ. 100.00 ಲಕ್ಷ ಅನುದಾನವನ್ನು ಮೇಲೆ (1) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಬಿಡುಗಡೆ ಮಾಡಲಾಗಿದೆ.

ವಸ್ತು ಸಂಗ್ರಹಾಲಯವನ್ನು ನಿರ್ಮಿಸುವ ಕುರಿತಂತೆ ಜಿಲ್ಲಾಧಿಕಾರಿಗಳು, ಗದಗ ಜಿಲ್ಲೆ ಇವರು ರೂ. 1,51,35,000/– ಗಳಿಗೆ ಅಂದಾಜು ಪಟ್ಟಿ ತಯಾರಿಸಿ, ಸದರಿ ಅಂದಾಜು ಪಟ್ಟಿಗೆ ಆಡಳಿತಾತ್ಮಕ ಅನುಮೋದನೆ ನೀಡುವಂತೆ ಕೋರಿರುವುದನ್ನು ಉಲ್ಲೇಖಿಸಿ, ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಇವರು ಮೇಲೆ ಓದಲಾದ (2) ರ ಪತ್ರದಲ್ಲಿ ಸದರಿ ಅಂದಾಜು ಪಟ್ಟಿಗೆ ಆಡಳಿತಾತ್ಮಕ ಅನುಮೋದನೆ ನೀಡುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಕಸಂವಾಪ್ರ 48 ಕೆಎಂಯು 2011, ಬೆಂಗಳೂರು, ದಿನಾಂಕ 03–03–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನ ಮಠ, ಗದಗ ಇಲ್ಲಿ ಭವ್ಯವಾದ ಮತ್ತು ಕಲಾತ್ಮಕವಾದ ವಸ್ತು ಸಂಗ್ರಹಾಲಯವನ್ನು ಸ್ಥಾಪಿಸಲು ಸರ್ಕಾರದ ಸಹಾಯಾನುದಾನ ರೂ. 100.00 (ರೂಪಾಯಿ ಒಂದು ನೂರು ಲಕ್ಷಗಳು ಮಾತ್ರ) ಲಕ್ಷಗಳಿಗೆ ಸೀಮಿತಗೊಳಿಸಿ, ಒಟ್ಟು ರೂ. 1,51,35,000/– (ರೂ. ಒಂದು ಕೋಟಿ ಐವತ್ತೊಂದು ಲಕ್ಷ ಮುವತ್ತೈದು ಸಾವಿರಗಳು ಮಾತ್ರ) ಗಳ ಅಂದಾಜು ಪಟ್ಟಿಗೆ ಈ ಕೆಳಕಂಡ ಷರತ್ತಿಗೊಳಪಟ್ಟು ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ.

1. ಸದರಿ ಕಾಮಗಾರಿಯ ಬಗ್ಗೆ ಸಕ್ಷಮ ಪ್ರಾಧಿಕಾರದಿಂದ ತಾಂತ್ರಿಕ ಅನುಮೋದನೆ ಪಡೆಯುವುದು.
2. ಕಾಮಗಾರಿಯನ್ನು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ ಹಾಗೂ ನಿಯಮಗಳನ್ನು ಪಾಲಿಸುವ ಮೂಲಕ ಕೈಗೊಳ್ಳುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2008 ದಿನಾಂಕ 16.05.2008 ರಲ್ಲಿ ಇಲಾಖಾ ಕಾರ್ಯದರ್ಶಿಗಳಿಗೆ ಪ್ರದತ್ತವಾದ ಅಧಿಕಾರದ ಪ್ರತ್ಯಾಯೋಜನೆಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ.ಕೆ. ಧರ್ಮರಾಜಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ)
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ
(ಆಡಳಿತ ಕನ್ನಡ)

ಪಿ.ಆರ್. 633

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ) ಯಲ್ಲಿ ಹೆಚ್ಚುವರಿ ಹುದ್ದೆಗಳನ್ನು ಸೃಜಿಸುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 411 ಸ ಆ ಸೇ 2008, ದಿನಾಂಕ: 28–07–2009

2. ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ) ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ ಸನೀಇ 115 ಮಾಸಾವಿ 2006 ದಿನಾಂಕ 21.01.2011.

ಪ್ರಸ್ತಾವನೆ:

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಆದೇಶದಲ್ಲಿ ಕರ್ನಾಟಕ ಸರ್ಕಾರಿ ಸಚಿವಾಲಯದ ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ) ಯಲ್ಲಿ ಈ ಕೆಳಕಂಡ ತಾತ್ಕಾಲಿಕ ಹುದ್ದೆಗಳನ್ನು ಸೃಜಿಸಲಾಗಿದೆ.

| ಕ್ರಮ ಸಂಖ್ಯೆ | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1 | ಸಹಾಯಕ ಕಾರ್ಯಪಾಲಕ ಇಂಜಿನಿಯರ್ (ವೇತನ ಶ್ರೇಣಿ ರೂ. 14,050–25050) | 01 |
| 2 | ಸಹಾಯಕ ಇಂಜಿನಿಯರ್ (ವೇತನ ಶ್ರೇಣಿ ರೂ. 11,400–21,600) | 03 |
| 3 | ಶೀಘ್ರಲಿಪಿಗಾರರು (ವೇತನ ಶ್ರೇಣಿ ರೂ. 8,000–14,800) | 01 |

ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ಅನಧಿಕೃತ ಟಿಪ್ಪಣಿಯಲ್ಲಿ ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)ಯು ದಿನಾಂಕ 28.07.2009 ರ ಆದೇಶದಲ್ಲಿ ಸೃಜಿಸಲಾದ ತಾತ್ಕಾಲಿಕ ಹುದ್ದೆಗಳನ್ನು 1 ವರ್ಷದ ಅವಧಿಗೆ ಎಂದು ತಿದ್ದುಪಡಿ ಆದೇಶ ಹೊರಡಿಸುವಂತೆ ಹಾಗೂ ಸದರಿ ಹುದ್ದೆಗಳನ್ನು ಮತ್ತೆ 1 ವರ್ಷದ ಅವಧಿಗೆ ಮುಂದುವರೆಸುವಂತೆ ಕೋರಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 559 ಸಅಸೇ 2010, ಬೆಂಗಳೂರು, ದಿನಾಂಕ 4ನೇ ಮಾರ್ಚ್ 2011**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಕರ್ನಾಟಕ ಸರ್ಕಾರ ಸಚಿವಾಲಯದ ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ) ಯಲ್ಲಿ ಸೃಜಿಸಲಾದ ಈ ಕೆಳಕಂಡ ಹುದ್ದೆಗಳನ್ನು ದಿನಾಂಕ 27.07.2011 ರವರೆಗೆ ತಾತ್ಕಾಲಿಕವಾಗಿ ಮುಂದುವರೆಸಿ ಆದೇಶಿಸಲಾಗಿದೆ.

| ಕ್ರಮ ಸಂಖ್ಯೆ | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1 | ಸಹಾಯಕ ಕಾರ್ಯಪಾಲಕ ಇಂಜಿನಿಯರ್<br>(ವೇತನ ಶ್ರೇಣಿ ರೂ. 14,050–25050) | 01 |
| 2 | ಸಹಾಯಕ ಇಂಜಿನಿಯರ್<br>(ವೇತನ ಶ್ರೇಣಿ ರೂ. 11,400–21,600) | 03 |
| 3 | ಶೀಘ್ರಲಿಪಿಗಾರರು<br>(ವೇತನ ಶ್ರೇಣಿ ರೂ. 8,000–14,800) | 01 |

ಮೇಲ್ಕಂಡ ಹುದ್ದೆಗಳನ್ನು ಭರ್ತಿ ಮಾಡುವ ಬಗ್ಗೆ ದಿನಾಂಕ 28.07.2009 ರ ಆದೇಶದಲ್ಲಿ ನಿಗದಿಪಡಿಸಲಾದ ಕ್ರಮಗಳನ್ನು ಅನುಸರಿಸಲು ಆದೇಶಿಸಿದೆ.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10–07–1996 ರಲ್ಲಿ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಆರ್ಥಿಕ ಇಲಾಖೆ ಸಹಮತಿ ನೀಡಿದೆ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 634

**ಎ.ಆರ್. ವಿಜಯಾನಂದ ಶರ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು–3)

## INFORMATION TECHNOLOGY, BIOTECHNOLOGY AND SCIENCE AND TECHNOLOGY SECRETARIAT

**Sub:** Proposal for setting up of Bio IT Centre at IBAB, Bangalore – release of grants.

**Read:**
1) Government Order No. ITD 49 MDA 2008, Dated 31-3-2010.
2) Government Order No. ITD 49 MDA 2008, Dated 24-07-2010.
3) Government Order No. ITD 49 MDA 2008, Dated 30-09-2010.
4) Letter dated: 19-01-2011 received from Director IBAB Bangalore.

**PREAMBLE:**

In the Government order dated 31.3.2010, approval was accorded for setting up of Bio IT Centre at IBAB campus in Biotech Park, Electronic City, $1^{st}$ Phase, Bangalore with an outlay of Rs. 19.51 crores spread over a period of 5 years, wherein the contribution of Government of India (DIT) would be Rs. 10.00 crores, Government of Karnataka contribution Rs. 5.00 crores, IBAB contribution Rs. 0.76 Crores and Strandlife Sciences Rs. 3.75 crores. An amount of Rs. 1.00 crore was released towards State Government contribution for the project during 2009-10.

Further, an amount of Rs. 1.00 crore was released vide G.O. dated 30.9.2010, read at (2) above and Rs. 1.00 crore vide G.O. dated 30.9.2010 read at (3) above out of budget provision of Rs. 5.00 crores provided in the 2010-11 budget.

Government of India has released an amount of Rs. 7.84 crores sofar, towards their contribution [i.e., Rs. 0.5 crores on 31.3.2010, Rs. 5.00 crores on 5.8.2010 and Rs. 2.79 crores on 13.1.2011] for the said project.

The Director, IBAB vide their letter dated 19.1.2011, read at [4] above, has reported that Government of India has released an amount of Rs. 7.84 crores and as against which GOK has released Rs. 3.00 crores so far. The amount released by GOI & GoK has been fully spent. The grants released by GoI and GoK has been utilized to procure a number of sophisticated equipment required for the Bio-IT Centre and therefore has requested to release the balance amount of Rs. 3.00 crores provided in the 2010-11 budget.

As per the project proposal Government of Karnataka's contribution is only Rs. 5.00 crores out of which an amount of Rs. 3.00 crores has already released and hence, it is considered necessary to release the balance grant of Rs. 2.00 crores to IBAB, out of the funds provided in the budget under the head of **account "3451-00-090-2-22 Institute of Bio-Informatics and Applied Biotechnology [IBAB] - 100 – Financial Assistance / Relief [Plan]",** for setting up of Bio IT Facility during 2010-11. Hence, the order.

**Government Order No. ITD 49 MDA 2008 BANGALORE, DATED 03-03-2011**

In the circumstance explained in the preamble, Government are pleased to accord approval for further release of balance amount of Rs. 2.00 crores (Two crores only) during the financial year 2010-11 as final installment of Government of Karnataka contribution to the Director, IBAB towards setting up of Bio-IT Centre at IBAB campus, Electronic City, Bangalore, through the Director of Information Technology and Biotechnology.

The expenditure on this account shall be met out of the grants provided under Head of Account **"3451-00-090-2-22 Institute of Bio-Informatics and Applied Biotechnology [IBAB] - 100 – Financial Assistance / Relief [Plan]"** for the year 2010-11.

The Administrative Officer, Directorate of Information Technology & Bio Technology Department shall draw the said grant from the Treasury duly countersigned by the Director, Information Technology & Biotechnology and disburse the amount.

The Director, Institute of Bio-informatics and Applied Biotechnology [IBAB] shall submit the Utilization Certificate in the prescribed format through the Director, Information Technology and Biotechnology, Bangalore.

This order issues with the concurrence of vide FD Note No: FD 66 Exp-2/2011 dated: 01-03-2011.

By Order and in the name of the Governor of Karnataka

**K. Borlingaiah**

Under Secretary to Government (I/c)

P.R. 635

Information Technology, Biotechnology

and Science and Technology Department

## ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ

**ವಿಷಯ :** ಶ್ರೀಮತಿ ಎಸ್. ಇಂದುಮತಿ, ಸರ್ಕಾರದ ಉಪ ಕಾರ್ಯದರ್ಶಿ ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಇಲಾಖೆ, ಇವರನ್ನು ದಿ: 07–03–2011 ರಂದು ನವದೆಹಲಿಯಲ್ಲಿ ನಡೆಯುವ "Cyber Crimes & Challenges though Capacity Building", ಸಮ್ಮೇಳನದಲ್ಲಿ ಭಾಗವಹಿಸಲು ಹಾಗೂ ರವಾಂಡ ಸರ್ಕಾರದ ಜೊತೆ ಒಪ್ಪಂದ ಮಾಡಿಕೊಳ್ಳುವ ಸಂಬಂಧ ಕೇಂದ್ರ ಸರ್ಕಾರದ ಗೃಹ ಸಚಿವಾಲಯದ ಜೊತೆ ವ್ಯವಹರಿಸಲು ನಿಯೋಜಿಸುವ ಕುರಿತು.

**ಓದಲಾಗಿದೆ :** 1 ಮುಖ್ಯ ಕಾರ್ಯ ನಿರ್ವಹಣಾಧಿಕಾರಿ, ಡೇಟಾ ಸೆಕ್ಯೂರಿಟಿ ಕೌನ್ಸಿಲ್ ಆಫ್ ಇಂಡಿಯಾ, ನವದೆಹಲಿ, ಇವರ ಜಿ–ಮೇಲ್ ದಿ: 18–02–2011.

2 ಆದೇಶ ಸಂಖ್ಯೆ: ಐಟಿಡಿ 06 ಡಿಐಎಸ್ 2011 ದಿ: 24–02–2011.

**ಪ್ರಸ್ತಾವನೆ:**

ದಿನಾಂಕ: 18–02–2011ರ ಇ–ಮೇಲ್‌ನಲ್ಲಿ ಮುಖ್ಯ ಕಾರ್ಯ ನಿರ್ವಹಣಾಧಿಕಾರಿ, ಡೇಟಾ ಸೆಕ್ಯೂರಿಟಿ ಕೌನ್ಸಿಲ್ ಆಫ್ ಇಂಡಿಯಾ, ನಾಸ್ಕಾಂ, ನವದೆಹಲಿ, ಇವರು ನವದೆಹಲಿಯ Hyatt Regency, Bhikaji, Palace ಇಲ್ಲಿ ದಿ: 07–03–2011ರಂದು "Cyber Crimes Challenges though Capacity Building" ಸಮ್ಮೇಳನ ನಡೆಸಲಾಗುತ್ತಿದ್ದು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಇಲಾಖೆಯ ಅಧಿಕಾರಿಗಳನ್ನು ಮೇಲಿನ ಸಮ್ಮೇಳನದಲ್ಲಿ ಭಾಗವಹಿಸಲು ನಿಯೋಜಿಸುವಂತೆ ಓದಲಾದ ಪತ್ರದಲ್ಲಿ ಕೋರಿರುತ್ತಾರೆ. ಓದಲಾದ (2) ರ ಆದೇಶದಲ್ಲಿ ಶ್ರೀಮತಿ ಚಂಪಾ ಇ. ಸೀನಿಯರ್ ಪ್ರೋಗ್ರಾಮರ್, ಮಾಹಿತಿ ತಂತ್ರಜ್ಞಾನ ನಿರ್ದೇಶನಾಲಯ ಬೆಂಗಳೂರು ಇವರನ್ನು ಸದರಿ ಸಮ್ಮೇಳನದಲ್ಲಿ ಭಾಗವಹಿಸಲು ನಿಯೋಜಿಸಿ, ಆದೇಶಿಸಲಾಗಿತ್ತು. ಆದರೆ ದಿ: 17–18ನೇ ಮಾರ್ಚ್ 2011 ರಂದು "ಸೈಬರ್ ಸೆಕ್ಯೂರಿಟಿ" ಕುರಿತಾಗಿ ರಾಷ್ಟ್ರೀಯ ಸಮ್ಮೇಳನ ನಡೆಯಲಿದ್ದು, ಈ ಸಂಬಂಧ ಶ್ರೀಮತಿ ಚಂಪಾರವರ ಹಾಜರಾತಿ ಅಗತ್ಯವಿರುವುದರಿಂದ ಇವರ ನಿಯೋಜನೆಯನ್ನು ರದ್ದುಪಡಿಸಿ, ಶ್ರೀಮತಿ ಎಸ್. ಇಂದುಮತಿ, ಸರ್ಕಾರದ ಉಪ ಕಾರ್ಯದರ್ಶಿ, ಇವರನ್ನು ದಿ: 07–03–2011ರಂದು ನಡೆಯಲಿರುವ ಸಮ್ಮೇಳನದಲ್ಲಿ ಹಾಗೂ ರವಾಂಡ ಸರ್ಕಾರದ ಜೊತೆ ಒಪ್ಪಂದ ಮಾಡಿಕೊಳ್ಳುವ ಸಂಬಂಧ ಕೇಂದ್ರ ಸರ್ಕಾರದ ಗೃಹ ಸಚಿವಾಲಯದೊಡನೆ ವ್ಯವಹರಿಸುವ ಸಂಬಂಧ ನಿಯೋಜಿಸಲು ತೀರ್ಮಾನಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಐಟಿಡಿ 06 ಡಿಐಎಸ್ 2011 ಬೆಂಗಳೂರು, ದಿ: 04–03–2011**

ಶ್ರೀಮತಿ ಎಸ್. ಇಂದುಮತಿ, ಸರ್ಕಾರದ ಉಪ ಕಾರ್ಯದರ್ಶಿ, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ ಇವರನ್ನು ನವದೆಹಲಿಯ Hyatt Regency, Bhikaji, Palace ಇಲ್ಲಿ ದಿ: 07–03–2011ರಂದು ನಡೆಯಲಿರುವ "Cyber Crimes Challenges though Capacity Building" ಸಮ್ಮೇಳನದಲ್ಲಿ ಭಾಗವಹಿಸಲು ಹಾಗೂ ದಿ: 08–03–2011ರಂದು ರವಾಂಡ ದೇಶದ ಜೊತೆ ಒಪ್ಪಂದ ಮಾಡಿಕೊಳ್ಳುವ ವಿಷಯ ಕುರಿತಾಗಿ ಕೇಂದ್ರ ಸರ್ಕಾರದ ಗೃಹ ಸಚಿವಾಲಯದೊಡನೆ ವ್ಯವಹರಿಸುವ ಸಲುವಾಗಿ ನಿಯೋಜಿಸಿ, ಆದೇಶಿಸಿದೆ.

ಸದರಿ ಅಧಿಕಾರಿಯ ದಿನಾಂಕ: 07–03–2011, 08–03–2011ರ ಅವಧಿಯ ಗೈರುಹಾಜರಿಯನ್ನು ಹಾಗೂ ಪ್ರಯಾಣದ ಅವಧಿಯನ್ನು ಕರ್ತವ್ಯದ ಮೇಲೆ ಎಂದು ಪರಿಗಣಿಸಲಾಗಿದೆ ಹಾಗೂ ಸದರಿ ಪ್ರಯಾಣಕ್ಕೆ ಕೆಸಿಎಸ್ಆರ್ ನಿಯಮಾವಳಿ ಪ್ರಕಾರ ಲಭ್ಯವಿರುವ ಪ್ರಯಾಣ ಭತ್ಯೆ, ದಿನ ಭತ್ಯೆ ಪಡೆಯಲು ಅಧಿಕಾರಿಯವರು ಅರ್ಹರಾಗಿರುತ್ತಾರೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10.7.1996 ರಲ್ಲಿ ಇಲಾಖಾ ಪ್ರಧಾನ ಕಾರ್ಯದರ್ಶಿಗಳಿಗೆ ಪ್ರದತ್ತವಾದ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 636

**ಕೆ. ಬೋರಲಿಂಗಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ).

ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ

ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ

## ನಗರಾಭಿವೃದ್ಧಿ ಸಚಿವಾಲಯ

**ವಿಷಯ :** ಮಂಗಳೂರು ಮಹಾನಗರ ಪಾಲಿಕೆಯಲ್ಲಿ ರೂ. 100 ಕೋಟಿ ವಿಶೇಷ ಅನುದಾನದ ಯೋಜನೆ ಅಡಿ 2ನೇ ಹಂತದಲ್ಲಿ ಕೈಗೊಳ್ಳಲು ಉದ್ದೇಶಿಸಿರುವ ಕಾಮಗಾರಿಗಳ ಕ್ರಿಯಾ ಯೋಜನೆ ಪಟ್ಟಿಗೆ ಸರ್ಕಾರದ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ : ನಅಇ 167 ಎಸಿಬಿ 2010, ದಿ : 13-08-2010
2. ಸರ್ಕಾರದ ಸುತ್ತೋಲೆ ಸಂಖ್ಯೆ : ನಅಇ 167 ಎಸಿಬಿ 2010, ದಿ : 24-08-2010
3. ಸರ್ಕಾರದ ಪತ್ರ ಸಂಖ್ಯೆ : ನಅಇ 103 ಎಂಎಂಸಿ 2010, ದಿನಾಂಕ : 10-02-2011
4. ಆಯುಕ್ತರು, ಪೌರಾಡಳಿತ ನಿರ್ದೇಶನಾಲಯ ಇವರ ಏಕ ಕಡತ ಸಂಖ್ಯೆ : ಪೌನಿ/ತಾಂತ್ರಿಕ/ಮನಪಾ/ಮಂಗಳೂರು/116 (ಭಾಗ-4)/ 2010-11
5. ಆಯುಕ್ತರು, ಮಂಗಳೂರು ಮಹಾನಗರಪಾಲಿಕೆ ಇವರ ಪತ್ರ ಸಂಖ್ಯೆ : ಮನಪಾ/ ಅಕೋ/100 ಕೋಟಿ/2ನೇ ಹಂತ/ಪರಿಷ್ಕೃತ/ಎಫ್ 3/ಸಿ.ಆರ್.29/ 2010-11, ದಿನಾಂಕ : 11-2-2011
6. ಸರ್ಕಾರದ ಅಧಿಸೂಚನೆ ಸಂಖ್ಯೆ : ಸಿಆಸುಇ 20 ಇಜಿವಿ 2009(4), ದಿನಾಂಕ : 13-07-2009

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ದಿನಾಂಕ : 13-08-2010ರ ಆದೇಶದಲ್ಲಿ ಮಂಗಳೂರು ಮಹಾನಗರಪಾಲಿಕೆ ಸೇರಿದಂತೆ ರಾಜ್ಯದಲ್ಲಿನ 7 ಮಹಾನಗರ ಪಾಲಿಕೆಗಳಲ್ಲಿ 2ನೇ ಹಂತದಲ್ಲಿ ಅಭಿವೃದ್ಧಿ ಕಾಮಗಾರಿಗಳನ್ನು ತೆಗೆದುಕೊಳ್ಳಲು 2011-12 ರಿಂದ 2013-14ರ ಆರ್ಥಿಕ ವರ್ಷಗಳಲ್ಲಿ ಪ್ರತಿ ಮಹಾನಗರಪಾಲಿಕೆಗೆ ತಲಾ ರೂ. 100 ಕೋಟಿಯಂತೆ ವಿಶೇಷ ಅನುದಾನವನ್ನು ಒದಗಿಸಲು ಕೆಲವು ಷರತ್ತುಗಳಿಗೊಳಪಟ್ಟು ಸರ್ಕಾರದ ತಾತ್ವಿಕ ಅನುಮೋದನೆ ನೀಡಲಾಗಿದೆ.

2) ಮೇಲೆ (2)ರಲ್ಲಿ ಓದಲಾದ ಸರ್ಕಾರದ ದಿನಾಂಕ : 24-08-2010ರ ಸುತ್ತೋಲೆಯಲ್ಲಿ ರಾಜ್ಯದಲ್ಲಿನ 7 ಮಹಾನಗರಪಾಲಿಕೆಗಳಲ್ಲಿ 2ನೇ ಹಂತದಲ್ಲಿ ತೆಗೆದುಕೊಳ್ಳಲು ಉದ್ದೇಶಿಸಲಾಗಿರುವ ಅಭಿವೃದ್ಧಿ ಕಾಮಗಾರಿಗಳನ್ನು ಆಯ್ಕೆ ಮಾಡುವುದಕ್ಕೆ ಮತ್ತು ಅನುಷ್ಠಾನಗೊಳಿಸುವುದಕ್ಕೆ ಸಂಬಂಧಪಟ್ಟಂತೆ ಮಾರ್ಗದರ್ಶಿ ಸೂತ್ರಗಳನ್ನು ನೀಡಲಾಗಿದೆ.

3) ಮೇಲೆ ಕ್ರಮಾಂಕ (4) ರಲ್ಲಿ ಓದಲಾದ ಏಕ ಕಡತದಲ್ಲಿ ಆಯುಕ್ತರು, ಪೌರಾಡಳಿತ ನಿರ್ದೇಶನಾಲಯ ಇವರು ಸರ್ಕಾರಕ್ಕೆ ಸಲ್ಲಿಸಿರುವ ಪ್ರಸ್ತಾವನೆಯಲ್ಲಿ ರೂ. 100 ಕೋಟಿ ವಿಶೇಷ ಅನುದಾನದ ಯೋಜನೆ ಅಡಿ ಮಂಗಳೂರು ಮಹಾನಗರಪಾಲಿಕೆಯಲ್ಲಿ 2ನೇ ಹಂತದಲ್ಲಿ ಕೈಗೊಳ್ಳಲು ಉದ್ದೇಶಿಸಿರುವ ಕಾಮಗಾರಿಗಳ ಕ್ರಿಯಾ ಯೋಜನೆ ಪಟ್ಟಿಯನ್ನು ಸಲ್ಲಿಸಿ ಸರ್ಕಾರದ ಅನುಮೋದನೆ ಕೋರಿರುತ್ತಾರೆ. ಪ್ರಸ್ತಾವನೆಯಲ್ಲಿ ತಿಳಿಸಿರುವಂತೆ ಮಂಗಳೂರು ಮಹಾನಗರಪಾಲಿಕೆಯಲ್ಲಿ ಇತರೆ ಮೂಲಗಳಿಂದ ಪಡೆಯಲಾದ ಅನುದಾನದಲ್ಲಿ ಕುಡಿಯುವ ನೀರು ಸರಬರಾಜಿಗೆ ಸಂಬಂಧಪಟ್ಟಂತೆ ಹಲವು ಕಾಮಗಾರಿಗಳನ್ನು ಕೈಗೊಂಡಿದ್ದು, ಈ ಸಂಬಂಧಿತ ಕಾಮಗಾರಿಗಳ ಬದಲಾಗಿ ರಸ್ತೆ ಅಭಿವೃದ್ಧಿ ಕಾಮಗಾರಿಗಳನ್ನು ಕೈಗೊಳ್ಳಲು ಪ್ರಸ್ತಾಪಿಸಲಾಗಿದೆ. ಅದರಂತೆ ಸರ್ಕಾರಕ್ಕೆ ಸಲ್ಲಿಸಿರುವ ಪ್ರಸ್ತಾವನೆಯಲ್ಲಿ ಕ್ರಮಾಂಕ (2)ರ ಸುತ್ತೋಲೆಯಲ್ಲಿ ವಲಯವಾರು ಕಾಮಗಾರಿಗಳ ಸ್ವರೂಪಕ್ಕೆ ನಿಗದಿಪಡಿಸಿರುವ ಕನಿಷ್ಠ/ಗರಿಷ್ಠ ಮಿತಿಯನ್ನು ಮಾರ್ಪಡಿಸಿ ಕಾಮಗಾರಿಗಳನ್ನು ಕೈಗೆತ್ತಿಕೊಂಡು ಕ್ರಿಯಾ ಯೋಜನೆಯಲ್ಲಿ ವಲಯವಾರು ಒಟ್ಟು ಮೊತ್ತವನ್ನು ನಿಗದಿಪಡಿಸಲು ಕೋರಿರುತ್ತಾರೆ.

4) ಮೇಲೆ (3) ರಲ್ಲಿ ಓದಲಾದ ಸರ್ಕಾರದ ದಿನಾಂಕ : 10-02-2011ರ ಪತ್ರದಲ್ಲಿ ಮಂಗಳೂರು ಮಹಾನಗರಪಾಲಿಕೆಯಲ್ಲಿ ರೂ. 100 ಕೋಟಿ ವಿಶೇಷ ಅನುದಾನದ ಯೋಜನೆ ಅಡಿ 2ನೇ ಹಂತದಲ್ಲಿ ಕೈಗೊಳ್ಳಲು ಉದ್ದೇಶಿಸಿರುವ ಕಾಮಗಾರಿಗಳ ಕ್ರಿಯಾ ಯೋಜನೆಯಲ್ಲಿ ಉಲ್ಲೇಖ (2) ರ ಸುತ್ತೋಲೆಯಲ್ಲಿ ಕಾಮಗಾರಿಗಳ ಸ್ವರೂಪಕ್ಕೆ ನಿಗದಿಪಡಿಸಿರುವ ಕನಿಷ್ಠ/ಗರಿಷ್ಠ ಮಿತಿಯನ್ನು ಮಾರ್ಪಡಿಸಿ ಈ ಕೆಳಕಂಡಂತೆ ಕಾಮಗಾರಿಗಳನ್ನು ಕೈಗೆತ್ತಿಕೊಂಡು ಕ್ರಿಯಾ ಯೋಜನೆಯಲ್ಲಿ ವಲಯವಾರು ಒಟ್ಟು ಮೊತ್ತಕ್ಕೆ ನಿಗದಿಪಡಿಸಲು ಕೋರಿರುವುದನ್ನು ಸರ್ಕಾರವು ತಾತ್ವಿಕವಾಗಿ ಒಪ್ಪಿ ಪ್ರತಿ ಕಾಮಗಾರಿಗಳ ಸಂಪೂರ್ಣ ವಿವರಗಳುಳ್ಳ ಪಟ್ಟಿಯನ್ನು ಸರ್ಕಾರಕ್ಕೆ ಸಲ್ಲಿಸಲು ಆಯುಕ್ತರು, ಮಂಗಳೂರು ಮಹಾನಗರಪಾಲಿಕೆ ಇವರಿಗೆ ಸೂಚಿಸಲಾಗಿತ್ತು.

(ಮೊತ್ತ ಕೋಟಿ ರೂಪಾಯಿಗಳಲ್ಲಿ)

| ಕ್ರ.ಸಂ. | ಕಾಮಗಾರಿಗಳ ಸ್ವರೂಪ | ಕನಿಷ್ಠ/ಗರಿಷ್ಠ ಮಿತಿ |
|---|---|---|
| 1 | ರಸ್ತೆಗಳು, ರಸ್ತೆ ಬದಿ ಚರಂಡಿಗಳ ಅಭಿವೃದ್ಧಿ, ಪಾದಚಾರಿ ಮಾರ್ಗ (Foot paths) ಮತ್ತು ಪಾದಚಾರಿ ಸುರಂಗ ಮಾರ್ಗಗಳು (pedestrian underpass/subways) | 67.32 |
| 2 | ಒಳಚರಂಡಿ ವ್ಯವಸ್ಥೆ ವಿತರಣಾ ಜಾಲ/ಲ್ಯಾಟರಲ್ಸ್ ಕಾಮಗಾರಿಗಳು ಹಾಗೂ ಇತರೆ ಯುಜಿಡಿ ಕಾಮಗಾರಿಗಳು | 2.00 |
| 3 | ಸಂಚಾರ ವ್ಯವಸ್ಥೆ ಸುಧಾರಣೆ ಕಾಮಗಾರಿಗಳು (Traffic management improvement works such as Vehicle Actuated Signal (Solar/UPS) Integrated with surveillance enforcement cameras) | 5.00 |
| 4 | ಘನತ್ಯಾಜ್ಯ ವಸ್ತು ನಿರ್ವಹಣೆ ಸಂಬಂಧಿತ Land Fill site ಅಭಿವೃದ್ಧಿ ಕಾಮಗಾರಿಗಳು, ನಗರ ಸ್ವಚ್ಛತೆ ನಿರ್ವಹಣೆ ಸಂಬಂಧಿತ ಯಂತ್ರೋಪಕರಣಗಳು, ಮಳೆ ನೀರು ಚರಂಡಿ ಕಾಮಗಾರಿಗಳು, ವಿದ್ಯುತ್ ಬೀದಿ ದೀಪಗಳ ಅಳವಡಿಕೆ ಹಾಗೂ ಇಂಧನ ಉಳಿತಾಯ ಕಾಮಗಾರಿಗಳು ಮತ್ತು ಇತರೆ ಮೂಲಭೂತ ಸೌಕರ್ಯ ಅಭಿವೃದ್ಧಿ ಕಾಮಗಾರಿಗಳು | 23..08 |
| 5 | ಉದ್ಯಾನವನಗಳ ನಿರ್ಮಾಣ/ಅಭಿವೃದ್ಧಿ ಮತ್ತು ನಗರ ಅರಣ್ಯೀಕರಣ | 2.60 |
| | ಒಟ್ಟು | 100.00 |

5) ಮೇಲೆ ಕ್ರಮಾಂಕ (5) ರಲ್ಲಿ ಓದಲಾದ ಪತ್ರದಲ್ಲಿ ಆಯುಕ್ತರು, ಮಂಗಳೂರು ಮಹಾನಗರ ಪಾಲಿಕೆ ರವರು ವಲಯವಾರು ಕಾಮಗಾರಿಗಳ ಸ್ವರೂಪಕ್ಕೆ ನಿಗದಿಪಡಿಸಿರುವ ಕನಿಷ್ಠ/ಗರಿಷ್ಠ ಮಿತಿಗೊಳಪಟ್ಟು ಪಾಲಿಕೆಯು ಕೈಗೆತ್ತಿಕೊಳ್ಳುವ ಕಾಮಗಾರಿಗಳ ಅಂದಾಜು ಮೊತ್ತ ಮತ್ತು ಕಾಮಗಾರಿಗಳ ವಿವರಗಳುಳ್ಳ ಪಟ್ಟಿಯನ್ನು ಸಲ್ಲಿಸಿರುತ್ತಾರೆ.

6) ಮೇಲೆ (6) ರಲ್ಲಿ ಓದಲಾದ ಸರ್ಕಾರದ ಅಧಿಸೂಚನೆಯಲ್ಲಿ ಮಂಗಳೂರು ಮಹಾನಗರಪಾಲಿಕೆ ಸೇರಿದಂತೆ ರಾಜ್ಯದಲ್ಲಿನ ಮಹಾನಗರಪಾಲಿಕೆಗಳಲ್ಲಿ ರೂ. 10 ಲಕ್ಷಕ್ಕೆ ಮೀರಿದ ಎಲ್ಲಾ ರೀತಿಯ ಸಾರ್ವಜನಿಕ ಸಂಗ್ರಹಣೆಗಳನ್ನು ಇ-ಪ್ರೊಕ್ಯೂರ್‌ಮೆಂಟ್ ಪ್ಲಾಟ್‌ಫಾರಂ ಮುಖಾಂತರ ಕೈಗೊಳ್ಳುವಂತೆ ಆದೇಶಿಸಲಾಗಿದೆ.

7) ಅದರಂತೆ ಪ್ರಸ್ತಾವನೆಯನ್ನು ಪರಿಗಣಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ನಅಇ 103 ಎಂಎಂಸಿ 2010, ಬೆಂಗಳೂರು, ದಿನಾಂಕ : 23ನೇ ಫೆಬ್ರವರಿ, 2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಮಂಗಳೂರು ಮಹಾನಗರ ಪಾಲಿಕೆಯಲ್ಲಿ ರೂ. 100 ಕೋಟಿ ವಿಶೇಷ ಅನುದಾನದ ಯೋಜನೆ ಅಡಿ 2ನೇ ಹಂತದಲ್ಲಿ ಕೈಗೊಳ್ಳಲು ಉದ್ದೇಶಿಸಿರುವ ಈ ಕೆಳಕಂಡ ಕಾಮಗಾರಿಗಳ ಕ್ರಿಯಾ ಯೋಜನೆ ಪಟ್ಟಿಗೆ ಸರ್ಕಾರದ ಅನುಮೋದನೆ ನೀಡಲಾಗಿದೆ.

| ಕ್ರ ಸಂ | | ಕೆಲಸದ ವಿವರ | ಅಂದಾಜು ಮೊತ್ತ (ರೂ. ಲಕ್ಷಗಳಲ್ಲಿ) |
|---|---|---|---|
| | I | ರಸ್ತೆಗಳು, ರಸ್ತೆ ಬದಿ ಚರಂಡಿಗಳ ಅಭಿವೃದ್ಧಿ ಪಾದಚಾರಿ ಮಾರ್ಗ (Foot paths) ಮತ್ತು ಪಾದಚಾರಿ ಸುರಂಗ ಮಾರ್ಗಗಳು (Pedestrain underpass/subways) | |
| 1 | | ಮಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯ ಲಾಲ್‌ಬಾಗ್ ಜಂಕ್ಷನ್‌ನಿಂದ ಸರ್ಕ್ಯೂಟ್ ಹೌಸ್ ಹಾಲಿ ಇರುವ ಚತುಷ್ಪಥ ಕಾಂಕ್ರೀಟ್ ರಸ್ತೆಗೆ ಎಡಬದಿ ಚರಂಡಿ ಹಾಗೂ ಫುಟ್‌ಪಾತ್ ರಚನೆ (ಚೈ. 0.00ಮೀ ನಿಂದ 1600.00 ಮೀ) | 275.00 |
| 2 | | ಮಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯ ಲಾಲ್‌ಬಾಗ್ ಜಂಕ್ಷನ್‌ನಿಂದ ಸರ್ಕ್ಯೂಟ್ ಹೌಸ್ ಹಾಲಿ ಇರುವ ಚತುಷ್ಪಥ ಕಾಂಕ್ರೀಟ್ ರಸ್ತೆಗೆ ಬಲಬದಿ ಚರಂಡಿ ಹಾಗೂ ಫುಟ್‌ಪಾತ್ ರಚನೆ (ಚೈ. 0.00ಮೀ ನಿಂದ 1600.00 ಮೀ) | 275.00 |
| 3 | | ಮಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯ ಪಿ.ವಿ.ಎಸ್ ವೃತ್ತದಿಂದ ಹಂಪನಕಟ್ಟೆ ಸಿಗ್ನಲ್ ವೃತ್ತದವರೆಗೆ ಎಡಬದಿ ಚರಂಡಿ ಹಾಗೂ ಫುಟ್‌ಪಾತ್ ರಚನೆ (ಚೈ.0.00 ನಿಂದ 600.00 ಮೀ) | 80.00 |
| 4 | | ಮಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯ ಪಿ.ವಿ.ಎಸ್ ಜಂಕ್ಷನ್ ಸುಗುಣೇಂದ್ರ ಸ್ಟೋರ್ಸ್‌ನಿಂದ ಕೆ.ಎಸ್.ರಾವ್ ರಸ್ತೆ ಸಿಗ್ನಲ್ ಜಂಕ್ಷನ್‌ವರೆಗೆ (ಸಿಂಡಿಕೇಟ್ ಬ್ಯಾಂಕ್ ಬದಿಯಿಂದ) ಚರಂಡಿ ಹಾಗೂ ಫುಟ್‌ಪಾತ್ ರಚನೆ (ಚೈ.0.00 ನಿಂದ 600.00ಮೀ) | 80.00 |
| 5 | | ಪಾಂಡೇಶ್ವರ ಮಂಗಳಾದೇವಿ ಮುಖ್ಯ ರಸ್ತೆಯಲ್ಲಿ ಸುಭಾಶ್‌ನಗರ ಜಂಕ್ಷನ್‌ನಿಂದ ಮಂಗಳಾದೇವಿ ದೇವಸ್ಥಾನ ವರೆಗೆ ರಸ್ತೆ ಮತ್ತು ಚರಂಡಿ ಹಾಗೂ ಫುಟ್‌ಪಾತ್ ರಚನೆ (ಚೈ. 1150.00 ನಿಂದ 1500.00ಮೀ) | 200.00 |
| 6 | | ಮಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯ ಬಂಟ್ಸ್ ಹಾಸ್ಟೆಲ್ ಜಂಕ್ಷನ್‌ನಿಂದ ಮಲ್ಲಿಕಟ್ಟೆ ಶಿವಭಾಗ್ ಜಂಕ್ಷನ್‌ವರೆಗೆ ರಸ್ತೆಯ ಎಡಬದಿ ಚರಂಡಿ ಹಾಗೂ ಫುಟ್‌ಪಾತ್ ರಚನೆ (ಚೈ. 0.00 ಮೀ ನಿಂದ 1600.00 ಮೀ) | 280.00 |
| 7 | | ಮಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯ ಬಂಟ್ಸ್ ಹಾಸ್ಟೆಲ್ ಜಂಕ್ಷನ್‌ನಿಂದ ಮಲ್ಲಿಕಟ್ಟೆ ಶಿವಭಾಗ್ ಜಂಕ್ಷನ್‌ವರೆಗೆ ರಸ್ತೆಯ ಬಲಬದಿ ಚರಂಡಿ ಹಾಗೂ ಫುಟ್‌ಪಾತ್ ರಚನೆ (ಚೈ. 0.00 ಮೀ ನಿಂದ 1600.00 ಮೀ) | 200.00 |
| 8 | | ಮಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯ ಕೋಡಿಕಲ್ ಮುಖ್ಯ ರಸ್ತೆ ಅಭಿವೃದ್ಧಿ (ಚೈ. 0.00 ಮೀ ನಿಂದ 500.00 ಮೀ) | 200.00 |
| 9 | | ಮಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯ ಮಂಗಳಾ ಕಾರ್ನಿಸ್ ಯೋಜನೆ ಅನುಷ್ಠಾನ | 200.00 |
| 10 | | ಮಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯ ಕುಂಟಿಕಾನ ಕಾವೂರು ಮುಖ್ಯ ರಸ್ತೆಯಲ್ಲಿ ದೇರೆಬೈಲ್ ಕೊಂಚಾಡಿ ಮಹಾಕಾಳಿ ಕಟ್ಟೆಯಿಂದ ಕಾವೂರು ಜಂಕ್ಷನ್‌ವರೆಗಿನ ರಸ್ತೆ ಅಭಿವೃದ್ಧಿ ಕೆಲಸ (ಚೈ. 1200.00ಮೀ. ನಿಂದ 1800.00ಮೀ) | 300.00 |
| 11 | | ಮಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯ ಕಾವೂರು ಜಂಕ್ಷನ್‌ನಿಂದ ಕೂಳೂರು ಜಂಕ್ಷನ್‌ವರೆಗಿನ ಮುಖ್ಯ ರಸ್ತೆಯಲ್ಲಿ ಶಾಂತಿನಗರ ಮೈದಾನ ಬಳಿಯಿಂದ ಕಾವೂರು ಜಂಕ್ಷನ್‌ವರೆಗೆ ರಸ್ತೆ ಅಭಿವೃದ್ಧಿ ಕೆಲಸ (ಚೈ. 1235.00 ಮೀ ನಿಂದ 1650.00 ಮೀ) | 400 |
| 12 | | ಮಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯ ಕೂಳೂರು ಫೇರಿ ರಸ್ತೆಯಲ್ಲಿ ಮಣ್ಣಗುಡ್ಡ ದುರ್ಗಾಮಹಲ್ ಜಂಕ್ಷನ್‌ನಿಂದ ಕಾಳಿಕಾಂಬ ಜಂಕ್ಷನ್ ವರೆಗಿನ ರಸ್ತೆ ಅಭಿವೃದ್ಧಿ ಕೆಲಸ (ಚೈ. 0.00 ನಿಂದ 1000.00 ಮೀ) | 580 |
| 13 | | ಮಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯ ಕಾರ್ ಸ್ಟ್ರೀಟ್ ಮುಖ್ಯ ರಸ್ತೆಯಲ್ಲಿ ಕಾಳಿಕಾಂಬ ಜಂಕ್ಷನ್‌ನಿಂದ ವೆಂಕಟರಮಣ ದೇವಸ್ಥಾನ ಜಂಕ್ಷನ್‌ವರೆಗೆ ರಸ್ತೆ ಅಭಿವೃದ್ಧಿ ಕೆಲಸ (ಚೈ. 1000.00 ನಿಂದ 1180.00 ಮೀ) | |
| 14 | | ಮಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯ ಪಡೀಲ್ ಬಜಾಲ್ ಮುಖ್ಯ ರಸ್ತೆ ಎನ್.ಎಚ್–17 ರಿಂದ ಎನ್. ಎಚ್–48ರ ವರೆಗಿನ ಮುಖ್ಯ ರಸ್ತೆಯನ್ನು ಅಗಲೀಕರಣಗೊಳಿಸಿ ಅಭಿವೃದ್ಧಿ ಕೆಲಸ (ಚೈ. 550.00 ನಿಂದ 5200.00 ಮೀ) | 200.00 |
| 15 | | ಮಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯ ಜಪ್ಪಿನಮೊಗರು ಎನ್.ಎಚ್–48 ರಿಂದ ಕಡೆಕಾರ್ ಮಲ್ಲಿಕಾರ್ಜುನ ದೇವಸ್ಥಾನ ಮುಖ್ಯರಸ್ತೆ ಅಭಿವೃದ್ಧಿ ಕೆಲಸ (ಚೈ. 0.00 ನಿಂದ 400.00 ಮೀ) | 200.00 |

| | | | |
|---|---|---|---|
| 16 | | ಮಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯ ಸುರತ್ಕಲ್ ಉಪ ವಿಭಾಗ ವ್ಯಾಪ್ತಿಯ ಚಿತ್ರಾಪುರ ಮುಖ್ಯ ರಸ್ತೆ ಅಭಿವೃದ್ಧಿ (ಚೈ. 1000.00 ನಿಂದ 2000.00 ಮೀ) | 300.00 |
| 17 | | ಮಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯ ಸುರತ್ಕಲ್ ಉಪ ವಿಭಾಗ ವ್ಯಾಪ್ತಿಯ ಶಿವಗಿರಿ ರಸ್ತೆ ಅಭಿವೃದ್ಧಿ (ಚೈ. 0.00 ಮೀ ನಿಂದ 700.00 ಮೀ) | 200.00 |
| 18 | | ಮಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯ ಕದ್ರಿ ಕಂಬಳ ಮುಖ್ಯ ರಸ್ತೆ ಎಡಬದಿ ಚರಂಡಿ ಹಾಗೂ ಫುಟ್‌ಪಾತ್ ರಚನೆ (ಚೈ. 0.00 ನಿಂದ 1300.00 ಮೀ) | 200.00 |
| 19 | | ಮಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯ ಕದ್ರಿ ಕಂಬಳ ಮುಖ್ಯ ರಸ್ತೆ ಬಲಬದಿ ಸೇತುವೆ ಸಹಿತ ಚರಂಡಿ ಹಾಗೂ ಫುಟ್‌ಪಾತ್ ರಚನೆ (ಚೈ. 0.00 ನಿಂದ 1300.00 ಮೀ) | 230.00 |
| 20 | | ಮಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯ ದೇರೆಬೈಲ್ ಕೊಂಚಾಡಿ ಲ್ಯಾಂಡ್ ಲಿಂಕ್ಸ್ ಮುಖ್ಯ ರಸ್ತೆ ಅಭಿವೃದ್ಧಿ (ಚೈ.0.00 ಮೀ ನಿಂದ 800.00ಮೀ) | 50.00 |
| 21 | | ಮಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯ ಮಾಲೆಮಾರ್ ರಸ್ತೆ ಅಭಿವೃದ್ಧಿ (ಚೈ. 0.00 ನಿಂದ 400.00 ಮೀ) | 200.00 |
| 22 | | ಮಹಾನಗರಪಾಲಿಕೆಯ ವ್ಯಾಪ್ತಿಯಲ್ಲಿನ ಪ್ರಮುಖ ಕೂಡು ರಸ್ತೆಗಳನ್ನು ಮೇಲ್ದರ್ಜೆಗೇರಿಸಿ ಅಭಿವೃದ್ಧಿ ಕಾಮಗಾರಿ (ಪಟ್ಟಿ ಲಗತ್ತಿಸಿದೆ.) | |
| | 1 | ಮಹಾನಗರ ಪಾಲಿಕೆ ವ್ಯಾಪ್ತಿಯ ವಾರ್ಡ್ ನಂ. 1 ಸುರತ್ಕಲ್ ಪಶ್ಚಿಮ ಮುಖ್ಯ ರಸ್ತೆ ಅಭಿವೃದ್ಧಿ | 25.00 |
| | 2 | ಮಹಾನಗರ ಪಾಲಿಕೆ ವ್ಯಾಪ್ತಿಯ ವಾರ್ಡ್ ನಂ. 2 ಸುರತ್ಕಲ್ ಪೂರ್ವ ಮುಖ್ಯ ರಸ್ತೆ ಅಭಿವೃದ್ಧಿ | 25.00 |
| | 3 | ಮಹಾನಗರ ಪಾಲಿಕೆ ವ್ಯಾಪ್ತಿಯ ವಾರ್ಡ್ ನಂ. 3 ಕಾಟಿಪಳ್ಳ ಪೂರ್ವ ಮುಖ್ಯ ರಸ್ತೆ ಅಭಿವೃದ್ಧಿ | 25.00 |
| | 4 | ಮಹಾನಗರ ಪಾಲಿಕೆ ವ್ಯಾಪ್ತಿಯ ವಾರ್ಡ್ ನಂ. 4 ಕಾಟಿಪಳ್ಳ ಕೃಷ್ಣಾಪುರ ಮುಖ್ಯ ರಸ್ತೆ ಅಭಿವೃದ್ಧಿ | 25.00 |
| | 5 | ಮಹಾನಗರ ಪಾಲಿಕೆ ವ್ಯಾಪ್ತಿಯ ವಾರ್ಡ್ ನಂ. 5 ಕಾಟಿಪಳ್ಳ ಉತ್ತರ ಮುಖ್ಯ ರಸ್ತೆ ಅಭಿವೃದ್ಧಿ | 25.00 |
| | 6 | ಮಹಾನಗರ ಪಾಲಿಕೆ ವ್ಯಾಪ್ತಿಯ ವಾರ್ಡ್ ನಂ. 6 ಇಡ್ಯಾ ಪೂರ್ವ ಮುಖ್ಯ ರಸ್ತೆ ಅಭಿವೃದ್ಧಿ | 25.00 |
| | 7 | ಮಹಾನಗರ ಪಾಲಿಕೆ ವ್ಯಾಪ್ತಿಯ ವಾರ್ಡ್ ನಂ. 7 ಇಡ್ಯಾ ಪಶ್ಚಿಮ ಮುಖ್ಯ ರಸ್ತೆ ಅಭಿವೃದ್ಧಿ | 25.00 |
| | 8 | ಮಹಾನಗರ ಪಾಲಿಕೆ ವ್ಯಾಪ್ತಿಯ ವಾರ್ಡ್ ನಂ. 8 ಹೊಸಬೆಟ್ಟು ಮುಖ್ಯ ರಸ್ತೆ ಅಭಿವೃದ್ಧಿ | 25.00 |
| | 9 | ಮಹಾನಗರ ಪಾಲಿಕೆ ವ್ಯಾಪ್ತಿಯ ವಾರ್ಡ್ ನಂ. 9 ಕುಳಾಯಿ ಮುಖ್ಯ ರಸ್ತೆ ಅಭಿವೃದ್ಧಿ | 25.00 |
| | 10 | ಮಹಾನಗರ ಪಾಲಿಕೆ ವ್ಯಾಪ್ತಿಯ ವಾರ್ಡ್ ನಂ. 10 ಬೈಕಂಪಾಡಿ ಮುಖ್ಯ ರಸ್ತೆ ಅಭಿವೃದ್ಧಿ | 25.00 |
| | 11 | ಮಹಾನಗರ ಪಾಲಿಕೆ ವ್ಯಾಪ್ತಿಯ ವಾರ್ಡ್ ನಂ. 11 ಪಣಂಬೂರು ಬೆಂಗ್ರ ಮುಖ್ಯ ರಸ್ತೆ ಅಭಿವೃದ್ಧಿ | 25.00 |
| | 12 | ಮಹಾನಗರ ಪಾಲಿಕೆ ವ್ಯಾಪ್ತಿಯ ವಾರ್ಡ್ ನಂ. 12 ಪಂಜಿಮೊಗರು ಮುಖ್ಯ ರಸ್ತೆ ಅಭಿವೃದ್ಧಿ | 25.00 |
| | 13 | ಮಹಾನಗರ ಪಾಲಿಕೆ ವ್ಯಾಪ್ತಿಯ ವಾರ್ಡ್ ನಂ. 13 ಕುಂಜತ್ತ್ ಬೈಲ್ ಉತ್ತರ ಮುಖ್ಯ ರಸ್ತೆ ಅಭಿವೃದ್ಧಿ | 25.00 |
| | 14 | ಮಹಾನಗರ ಪಾಲಿಕೆ ವ್ಯಾಪ್ತಿಯ ವಾರ್ಡ್ ನಂ. 14 ಮರಕಡ ಮುಖ್ಯ ರಸ್ತೆ ಅಭಿವೃದ್ಧಿ | 25.00 |
| | 15 | ಮಹಾನಗರ ಪಾಲಿಕೆ ವ್ಯಾಪ್ತಿಯ ವಾರ್ಡ್ ನಂ. 15 ಕುಂಜತ್ತ್ ಬೈಲ್ ದಕ್ಷಿಣ ಮುಖ್ಯ ರಸ್ತೆ ಅಭಿವೃದ್ಧಿ | 25.00 |
| | 16 | ಮಹಾನಗರ ಪಾಲಿಕೆ ವ್ಯಾಪ್ತಿಯ ವಾರ್ಡ್ ನಂ. 16 ಬಂಗ್ರ ಕೂಳೂರು ಮುಖ್ಯ ರಸ್ತೆ ಅಭಿವೃದ್ಧಿ | 25.00 |
| | 17 | ಮಹಾನಗರ ಪಾಲಿಕೆ ವ್ಯಾಪ್ತಿಯ ವಾರ್ಡ್ ನಂ. 17 ದೇರೆಬೈಲು ಉತ್ತರ ಮುಖ್ಯ ರಸ್ತೆ ಅಭಿವೃದ್ಧಿ | 25.00 |
| | 18 | ಮಹಾನಗರ ಪಾಲಿಕೆ ವ್ಯಾಪ್ತಿಯ ವಾರ್ಡ್ ನಂ. 18 ಕಾವೂರು ಮುಖ್ಯ ರಸ್ತೆ ಅಭಿವೃದ್ಧಿ | 25.00 |
| | 19 | ಮಹಾನಗರ ಪಾಲಿಕೆ ವ್ಯಾಪ್ತಿಯ ವಾರ್ಡ್ ನಂ. 19 ಪಚ್ಚನಾಡಿ ಮುಖ್ಯ ರಸ್ತೆ ಅಭಿವೃದ್ಧಿ | 25.00 |
| | 20 | ಮಹಾನಗರ ಪಾಲಿಕೆ ವ್ಯಾಪ್ತಿಯ ವಾರ್ಡ್ ನಂ. 20 ತಿರುವೈಲು ಮುಖ್ಯ ರಸ್ತೆ ಅಭಿವೃದ್ಧಿ | 25.00 |
| | 21 | ಮಹಾನಗರ ಪಾಲಿಕೆ ವ್ಯಾಪ್ತಿಯ ವಾರ್ಡ್ ನಂ. 21 ಪದವು ಪಶ್ಚಿಮ ಮುಖ್ಯ ರಸ್ತೆ ಅಭಿವೃದ್ಧಿ | 25.00 |

| | | | |
|---|---|---|---|
| | 22 | ಮಹಾನಗರ ಪಾಲಿಕೆ ವ್ಯಾಪ್ತಿಯ ವಾರ್ಡ್ ನಂ. 22 ಕದ್ರಿ ಪದವು ಮುಖ್ಯ ರಸ್ತೆ ಅಭಿವೃದ್ಧಿ | 25.00 |
| | 23 | ಮಹಾನಗರ ಪಾಲಿಕೆ ವ್ಯಾಪ್ತಿಯ ವಾರ್ಡ್ ನಂ. 23 ದೇರೆಬೈಲು ಪೂರ್ವ ಮುಖ್ಯ ರಸ್ತೆ ಅಭಿವೃದ್ಧಿ | 25.00 |
| | 24 | ಮಹಾನಗರ ಪಾಲಿಕೆ ವ್ಯಾಪ್ತಿಯ ವಾರ್ಡ್ ನಂ. 24 ದೇರೆಬೈಲ್ ದಕ್ಷಿಣ ಮುಖ್ಯ ರಸ್ತೆ ಅಭಿವೃದ್ಧಿ | 25.00 |
| | 25 | ಮಹಾನಗರ ಪಾಲಿಕೆ ವ್ಯಾಪ್ತಿಯ ವಾರ್ಡ್ ನಂ. 25 ದೇರೆಬೈಲ್ ಪಶ್ಚಿಮ ಮುಖ್ಯ ರಸ್ತೆ ಅಭಿವೃದ್ಧಿ | 25.00 |
| | 26 | ಮಹಾನಗರ ಪಾಲಿಕೆ ವ್ಯಾಪ್ತಿಯ ವಾರ್ಡ್ ನಂ. 26 ದೇರೆಬೈಲ್ ನೈಋತ್ಯ ಮುಖ್ಯ ರಸ್ತೆ ಅಭಿವೃದ್ಧಿ | 25.00 |
| | 27 | ಮಹಾನಗರ ಪಾಲಿಕೆ ವ್ಯಾಪ್ತಿಯ ವಾರ್ಡ್ ನಂ. 27 ಬೋಳೂರು ಮುಖ್ಯ ರಸ್ತೆ ಅಭಿವೃದ್ಧಿ | 25.00 |
| | 28 | ಮಹಾನಗರ ಪಾಲಿಕೆ ವ್ಯಾಪ್ತಿಯ ವಾರ್ಡ್ ನಂ. 28 ಮಣ್ಣ ಗುಡ್ಡ ಮುಖ್ಯ ರಸ್ತೆ ಅಭಿವೃದ್ಧಿ | 25.00 |
| | 29 | ಮಹಾನಗರ ಪಾಲಿಕೆ ವ್ಯಾಪ್ತಿಯ ವಾರ್ಡ್ ನಂ. 29 ಕಂಬ್ಳ ಮುಖ್ಯ ರಸ್ತೆ ಅಭಿವೃದ್ಧಿ | 25.00 |
| | 30 | ಮಹಾನಗರ ಪಾಲಿಕೆ ವ್ಯಾಪ್ತಿಯ ವಾರ್ಡ್ ನಂ. 30 ಕೊಡಿಯಲ್ ಬೈಲ್ ಮುಖ್ಯ ರಸ್ತೆ ಅಭಿವೃದ್ಧಿ | 25.00 |
| | 31 | ಮಹಾನಗರ ಪಾಲಿಕೆ ವ್ಯಾಪ್ತಿಯ ವಾರ್ಡ್ ನಂ. 31 ಬಿಜೈ ಮುಖ್ಯ ರಸ್ತೆ ಅಭಿವೃದ್ಧಿ | 25.00 |
| | 32 | ಮಹಾನಗರ ಪಾಲಿಕೆ ವ್ಯಾಪ್ತಿಯ ವಾರ್ಡ್ ನಂ. 32 ಕದ್ರಿ ಉತ್ತರ ಮುಖ್ಯ ರಸ್ತೆ ಅಭಿವೃದ್ಧಿ | 25.00 |
| | 33 | ಮಹಾನಗರ ಪಾಲಿಕೆ ವ್ಯಾಪ್ತಿಯ ವಾರ್ಡ್ ನಂ. 33 ಕದ್ರಿ ದಕ್ಷಿಣ ಮುಖ್ಯ ರಸ್ತೆ ಅಭಿವೃದ್ಧಿ | 25.00 |
| | 34 | ಮಹಾನಗರ ಪಾಲಿಕೆ ವ್ಯಾಪ್ತಿಯ ವಾರ್ಡ್ ನಂ. 34 ಶಿವಭಾಗ್ ಮುಖ್ಯ ರಸ್ತೆ ಅಭಿವೃದ್ಧಿ | 25.00 |
| | 35 | ಮಹಾನಗರ ಪಾಲಿಕೆ ವ್ಯಾಪ್ತಿಯ ವಾರ್ಡ್ ನಂ. 35 ಪದವು ಸೆಂಟ್ರಲ್ ಮುಖ್ಯ ರಸ್ತೆ ಅಭಿವೃದ್ಧಿ | 25.00 |
| | 36 | ಮಹಾನಗರ ಪಾಲಿಕೆ ವ್ಯಾಪ್ತಿಯ ವಾರ್ಡ್ ನಂ. 36 ಪದವು ಪೂರ್ವ ಮುಖ್ಯ ರಸ್ತೆ ಅಭಿವೃದ್ಧಿ | 25.00 |
| | 37 | ಮಹಾನಗರ ಪಾಲಿಕೆ ವ್ಯಾಪ್ತಿಯ ವಾರ್ಡ್ ನಂ. 37 ಮರೋಳಿ ಮುಖ್ಯ ರಸ್ತೆ ಅಭಿವೃದ್ಧಿ | 25.00 |
| | 38 | ಮಹಾನಗರ ಪಾಲಿಕೆ ವ್ಯಾಪ್ತಿಯ ವಾರ್ಡ್ ನಂ. 38 ಬೆಂದೂರ್ ಮುಖ್ಯ ರಸ್ತೆ ಅಭಿವೃದ್ಧಿ | 25.00 |
| | 39 | ಮಹಾನಗರ ಪಾಲಿಕೆ ವ್ಯಾಪ್ತಿಯ ವಾರ್ಡ್ ನಂ. 39 ಫಳ್ನೀರ್ ಮುಖ್ಯ ರಸ್ತೆ ಅಭಿವೃದ್ಧಿ | 25.00 |
| | 40 | ಮಹಾನಗರ ಪಾಲಿಕೆ ವ್ಯಾಪ್ತಿಯ ವಾರ್ಡ್ ನಂ. 40 ಕೋರ್ಟ್ ಮುಖ್ಯ ರಸ್ತೆ ಅಭಿವೃದ್ಧಿ | 25.00 |
| | 41 | ಮಹಾನಗರ ಪಾಲಿಕೆ ವ್ಯಾಪ್ತಿಯ ವಾರ್ಡ್ ನಂ. 41 ಸೆಂಟ್ರಲ್ ಮಾರ್ಕೆಟ್ ಮುಖ್ಯ ರಸ್ತೆ ಅಭಿವೃದ್ಧಿ | 25.00 |
| | 42 | ಮಹಾನಗರ ಪಾಲಿಕೆ ವ್ಯಾಪ್ತಿಯ ವಾರ್ಡ್ ನಂ. 42 ಡೊಂಗರಕೇರಿ ಮುಖ್ಯ ರಸ್ತೆ ಅಭಿವೃದ್ಧಿ | 25.00 |
| | 43 | ಮಹಾನಗರ ಪಾಲಿಕೆ ವ್ಯಾಪ್ತಿಯ ವಾರ್ಡ್ ನಂ. 43 ಕುದ್ರೋಳಿ ಮುಖ್ಯ ರಸ್ತೆ ಅಭಿವೃದ್ಧಿ | 25.00 |
| | 44 | ಮಹಾನಗರ ಪಾಲಿಕೆ ವ್ಯಾಪ್ತಿಯ ವಾರ್ಡ್ ನಂ. 44 ಬಂದರ್ ಮುಖ್ಯ ರಸ್ತೆ ಅಭಿವೃದ್ಧಿ | 25.00 |
| | 45 | ಮಹಾನಗರ ಪಾಲಿಕೆ ವ್ಯಾಪ್ತಿಯ ವಾರ್ಡ್ ನಂ. 45 ಪೋರ್ಟ ಮುಖ್ಯ ರಸ್ತೆ ಅಭಿವೃದ್ಧಿ | 25.00 |
| | 46 | ಮಹಾನಗರ ಪಾಲಿಕೆ ವ್ಯಾಪ್ತಿಯ ವಾರ್ಡ್ ನಂ. 46 ಕಂಟೋನ್ಮೆಂಟ್ ಮುಖ್ಯರಸ್ತೆ ಅಭಿವೃದ್ಧಿ | 25.00 |
| | 47 | ಮಹಾನಗರ ಪಾಲಿಕೆ ವ್ಯಾಪ್ತಿಯ ವಾರ್ಡ್ ನಂ. 47 ಮಿಲಾಗ್ರಿಸ್ ಮುಖ್ಯ ರಸ್ತೆ ಅಭಿವೃದ್ಧಿ | 25.00 |
| | 48 | ಮಹಾನಗರ ಪಾಲಿಕೆ ವ್ಯಾಪ್ತಿಯ ವಾರ್ಡ್ ನಂ. 48 ಕಂಕನಾಡಿ ವೆಲೆನ್ಸಿಯಾ ಮುಖ್ಯ ರಸ್ತೆ ಅಭಿವೃದ್ಧಿ | 25.00 |
| | 49 | ಮಹಾನಗರ ಪಾಲಿಕೆ ವ್ಯಾಪ್ತಿಯ ವಾರ್ಡ್ ನಂ. 49 ಕಂಕನಾಡಿ ಮುಖ್ಯ ರಸ್ತೆ ಅಭಿವೃದ್ಧಿ | 25.00 |
| | 50 | ಮಹಾನಗರ ಪಾಲಿಕೆ ವ್ಯಾಪ್ತಿಯ ವಾರ್ಡ್ ನಂ. 50 ಅಳಪೆ ದಕ್ಷಿಣ ಮುಖ್ಯ ರಸ್ತೆ ಅಭಿವೃದ್ಧಿ | 25.00 |
| | 51 | ಮಹಾನಗರ ಪಾಲಿಕೆ ವ್ಯಾಪ್ತಿಯ ವಾರ್ಡ್ ನಂ. 51 ಅಳಪೆ ಉತ್ತರ ಮುಖ್ಯ ರಸ್ತೆ ಅಭಿವೃದ್ಧಿ | 25.00 |
| | 52 | ಮಹಾನಗರ ಪಾಲಿಕೆ ವ್ಯಾಪ್ತಿಯ ವಾರ್ಡ್ ನಂ. 52 ಕಣ್ಣೂರು ಮುಖ್ಯ ರಸ್ತೆ ಅಭಿವೃದ್ಧಿ | 25.00 |
| | 53 | ಮಹಾನಗರ ಪಾಲಿಕೆ ವ್ಯಾಪ್ತಿಯ ವಾರ್ಡ್ ನಂ. 53 ಬಜಾಲ್ ಮುಖ್ಯ ರಸ್ತೆ ಅಭಿವೃದ್ಧಿ | 25.00 |
| | 54 | ಮಹಾನಗರ ಪಾಲಿಕೆ ವ್ಯಾಪ್ತಿಯ ವಾರ್ಡ್ ನಂ. 54 ಜಪ್ಪಿನ ಮೊಗರು ಮುಖ್ಯ ರಸ್ತೆ ಅಭಿವೃದ್ಧಿ | 25.00 |
| | 55 | ಮಹಾನಗರ ಪಾಲಿಕೆ ವ್ಯಾಪ್ತಿಯ ವಾರ್ಡ್ ನಂ. 55 ಅತ್ತಾವರ ಮುಖ್ಯ ರಸ್ತೆ ಅಭಿವೃದ್ಧಿ | 25.00 |

| | | | |
|---|---|---|---|
| | 56 | ಮಹಾನಗರ ಪಾಲಿಕೆ ವ್ಯಾಪ್ತಿಯ ವಾರ್ಡ್ ನಂ. 56 ಮಂಗಳಾದೇವಿ ಮುಖ್ಯ ರಸ್ತೆ ಅಭಿವೃದ್ಧಿ | 25.00 |
| | 57 | ಮಹಾನಗರ ಪಾಲಿಕೆ ವ್ಯಾಪ್ತಿಯ ವಾರ್ಡ್ ನಂ. 57 ಹೊಯ್ಗೆ ಮುಖ್ಯ ರಸ್ತೆ ಅಭಿವೃದ್ಧಿ | 25.00 |
| | 58 | ಮಹಾನಗರ ಪಾಲಿಕೆ ವ್ಯಾಪ್ತಿಯ ವಾರ್ಡ್ ನಂ. 58 ಬೋಳಾರ ಮುಖ್ಯ ರಸ್ತೆ ಅಭಿವೃದ್ಧಿ | 25.00 |
| | 59 | ಮಹಾನಗರ ಪಾಲಿಕೆ ವ್ಯಾಪ್ತಿಯ ವಾರ್ಡ್ ನಂ. 59 ಜೆಪ್ಪು ಮುಖ್ಯ ರಸ್ತೆ ಅಭಿವೃದ್ಧಿ | 25.00 |
| | 60 | ಮಹಾನಗರ ಪಾಲಿಕೆ ವ್ಯಾಪ್ತಿಯ ವಾರ್ಡ್ ನಂ. 60 ಬೆಂಗ್ರೆ ಮುಖ್ಯ ರಸ್ತೆ ಅಭಿವೃದ್ಧಿ | 25.00 |
| 23 | | ಮಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯ ಮಾಲಾಡಿ ಕೋರ್ಟ್ ರಸ್ತೆ (ಚೈ.00.00 ನಿಂದ 700.00 ಮೀ) | 200.00 |
| 24 | | ಮಂಗಳೂರು ಮಹಾನಗರ ವ್ಯಾಪ್ತಿಯಲ್ಲಿನ ಪಳ್ನೀರ್ ಮುಖ್ಯ ರಸ್ತೆಯನ್ನು ಅವೇರಿ ಜಂಕ್ಷನ್‌ನಿಂದ ಕಂಕನಾಡಿ ವೃತ್ತದ ವರೆಗೆ ಅಭಿವೃದ್ಧಿಪಡಿಸುವುದು (ಚೈ.570.00 ನಿಂದ 1190.00 ಮೀ) | 232.00 |
| | | Sub-Total | 6732.00 |
| | | II ಒಳಚರಂಡಿ ವ್ಯವಸ್ಥೆ ವಿತರಣಾ ಜಾಲ/ಲ್ಯಾಟರಲ್ಸ್ ಕಾಮಗಾರಿಗಳು ಹಾಗೂ ಇತರೆ ಯುಜಿಡಿ ಕಾಮಗಾರಿಗಳು | |
| | a) | ಅತ್ತಾವರ ಕೆ.ಎಂ.ಸಿ. ಹಿಂಬದಿ ಒಳಚರಂಡಿ ವಿತರಣಾ ಜಾಲ ಅಭಿವೃದ್ಧಿ | 40.00 |
| | b) | ಪಾಂಡೇಶ್ವರ ದೂಮಪ್ಪ ಕಾಂಪೌಂಡ್ ಬಳಿ ಒಳಚರಂಡಿ ವಿತರಣಾ ಜಾಲ ಅಭಿವೃದ್ಧಿ | 40.00 |
| | c) | ಬೋಳೂರು ಪರಪು ಪ್ರದೇಶದಲ್ಲಿ ಒಳಚರಂಡಿ ವಿತರಣಾ ಜಾಲ ಅಭಿವೃದ್ಧಿ | 40.00 |
| | d) | ಅಶೋಕನಗರ ಸುಂಕದ ಕಟ್ಟೆ ಪ್ರದೇಶದಲ್ಲಿ ಒಳಚರಂಡಿ ವಿತರಣಾ ಜಾಲ ಅಭಿವೃದ್ಧಿ | 40.00 |
| | e) | ಪಚ್ಚನಾಡಿ ಕಾರ್ಮಿಕ ಕಾಲೋನಿಯಲ್ಲಿ ಒಳಚರಂಡಿ ವಿತರಣಾ ಜಾಲ ಅಭಿವೃದ್ಧಿ | 40.00 |
| | | Sub-Total | 200.00 |
| | | III ಸಂಚಾರ ವ್ಯವಸ್ಥೆ ಸುಧಾರಣೆ ಕಾಮಗಾರಿಗಳು (Traffic management improvement works such as Vehicle Actuated Signal (Solar/UPS) Integrated with surveillance enforcement cameras) | |
| | 1 | ಮಹಾ ನಗರ ಪಾಲಿಕೆಯ ವ್ಯಾಪ್ತಿಯಲ್ಲಿನ ಸಂಚಾರಿ ನಿಯಂತ್ರಣ ವ್ಯವಸ್ಥೆಯನ್ನು ಮೇಲ್ದರ್ಜೆಗೇರಿಸುವ ಕಾಮಗಾರಿ | 300.00 |
| | 2 | ಮಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯಲ್ಲಿನ ಸುಗಮ ಸಂಚಾರ ವ್ಯವಸ್ಥೆಗಾಗಿ ಪಂಪವೆಲ್‌ನಲ್ಲಿ ಬಸ್ ಟರ್ಮಿನಲ್ ನಿರ್ಮಾಣ ಕಾಮಗಾರಿ | 200.00 |
| | | Sub-Total | 500.00 |
| | | IV ಘನತ್ಯಾಜ್ಯ ವಸ್ತು ನಿರ್ವಹಣೆ ಸಂಬಂಧಿತ Land Fill site ಅಭಿವೃದ್ಧಿ ಕಾಮಗಾರಿಗಳು, ನಗರ ಸ್ವಚ್ಛತೆ ನಿರ್ವಹಣೆ ಸಂಬಂಧಿತ ಯಂತ್ರೋಪಕರಣಗಳು, ಮಳೆ ನೀರು ಚರಂಡಿ ಕಾಮಗಾರಿಗಳು, ವಿದ್ಯುತ್ ಬೀದಿ ದೀಪಗಳ ಅಳವಡಿಕೆ ಹಾಗೂ ಇಂಧನ ಉಳಿತಾಯ ಕಾಮಗಾರಿಗಳು ಮತ್ತು ಇತರೆ ಮೂಲಭೂತ ಸೌಕರ್ಯ ಅಭಿವೃದ್ಧಿ ಕಾಮಗಾರಿಗಳು | |
| ಎ) | | ಮಳೆ ನೀರು ಚರಂಡಿ ಕಾಮಗಾರಿಗಳು | |
| 1 | | ಮಂಗಳೂರು ಮಹಾನಗರ ಪಾಲಿಕೆ ಎ.ಬಿ. ಶೆಟ್ಟಿ ವೃತ್ತದಿಂದ ಸುಭಾಶ್ ನಗರ ಜಂಕ್ಷನ್‌ವರೆಗಿನ ಚೈ.0.00 ಮಿ.ನಿಂದ 1110.00 ಮಿ. ವರೆಗೆ ರಸ್ತೆಗೆ ಮಳೆ ನೀರು ಹರಿಯಲು ಮುಚ್ಚು ಚರಂಡಿ ನಿರ್ಮಾಣ | 250.00 |
| 2 | | ಕೆ.ಎಸ್.ಆರ್.ಟಿ.ಸಿ. ಜಂಕ್ಷನ್ ನಿಂದ ಕುಂಟಿಕಾನ ಜಂಕ್ಷನ್ ವರೆಗಿನ ಚತುಷ್ಪಥ ಕಾಂಕ್ರೀಟ್ ರಸ್ತೆಯ ಬಲಬದಿಯಲ್ಲಿ ಚೈ. 440.00 ಮೀ.ನಿಂದ 1650.00ಮಿ. ವರೆಗೆ ಮಳೆ ನೀರು ಹರಿಯಲು ಮುಚ್ಚು ಚರಂಡಿ ನಿರ್ಮಾಣ | 150.00 |
| 3 | | ಮಂಗಳೂರು ಮಹಾನಗರ ಪಾಲಿಕೆ ಕೆ.ಎಸ್.ಆರ್.ಟಿ.ಸಿ. ಜಂಕ್ಷನ್‌ನಿಂದ ಕುಂಟಿಕಾನ ಜಂಕ್ಷನ್‌ವರೆಗಿನ ಚತುಷ್ಪಥ ಕಾಂಕ್ರೀಟ್ ರಸ್ತೆಯ ಎಡಬದಿಯಲ್ಲಿ ಚೈ. 440.00 ಮಿ.ನಿಂದ 1650.00ಮಿ. ವರೆಗೆ ಮಳೆ ನೀರು ಹರಿಯಲು ಮುಚ್ಚು ಚರಂಡಿ ನಿರ್ಮಾಣ | 150.00 |
| 4 | | ಮಂಗಳೂರು ಮಹಾನಗರ ಪಾಲಿಕೆ ಹಂಪನಕಟ್ಟ ರಾವ್ ಎಂಡ್ ವೃತ್ತದಿಂದ ಕ್ಲಾಕ್ ಟವರ್ ವೃತ್ತದವರೆಗೆ ಚೈ.0.00 ಮಿ.ನಿಂದ 380.00 ಮಿ. ವರೆಗೆ ಮಳೆ ನೀರು ಹರಿಯಲು ಮುಚ್ಚು ಚರಂಡಿ ನಿರ್ಮಾಣ | 116.00 |
| 5 | | ಮಂಗಳೂರು ಮಹಾನಗರ ಪಾಲಿಕೆ ಕದ್ರಿ ಶಿವಭಾಗ್ ಜಂಕ್ಷನ್‌ನಿಂದ ಲೋವರ್ ಬೆಂದೂರ್ ವೃತ್ತ (ಸೈಂಟ್ ಆಗ್ನೇಸ್) ವರೆಗಿನ ಚತುಷ್ಪಥ ಕಾಂಕ್ರೀಟ್ ರಸ್ತೆಯ ಎಡಬದಿಯಲ್ಲಿ ಮಳೆ ನೀರು ಹರಿಯಲು ಮುಚ್ಚು ಚರಂಡಿ ನಿರ್ಮಾಣ | 200.00 |
| 6 | | ಮಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯ ಕದ್ರಿ ಶಿವಭಾಗ್ ಜಂಕ್ಷನ್ ನಿಂದ ಲೋವರ್ ಬೆಂದೂರ್ ವೃತ್ತ (ಸೈಂಟ್ ಆಗ್ನೇಸ್) ವರೆಗಿನ ಚತುಷ್ಪಥ ಕಾಂಕ್ರೀಟ್ ರಸ್ತೆಯ ಬಲಬದಿಯಲ್ಲಿ ಮಳೆ ನೀರು ಹರಿಯಲು ಮುಚ್ಚು ಚರಂಡಿ ನಿರ್ಮಾಣ | 200.00 |

